# ಶ್ರೀವಿಷ್ಣುಸಹಸ್ರನಾಮ 1967

(ಭಾಷ್ಯಸಹಿತ)



ಸ್ವಾಮಿ ವಿಜ್ಞಾನಂದ



ಶ್ರೀರಾಮಕೃಷ್ಣಾಶ್ರಮ
ಮೈಸೂರು

# ಮುನ್ನುಡಿ

ಶ್ರೀಶಂಕರಭಗವತ್ಪಾದರು ತಮ್ಮ ವಿಷ್ಣುಸಹಸ್ರನಾಮಭಾಷ್ಯದಲ್ಲಿ ...ದಗಳ ಸಹಸ್ರಶಾಖೆಗಳನ್ನು ತಿಳಿದಿರುವ ಸರ್ವಜ್ಞನೂ ಸಾಕ್ಷಾತ್ ...ಯಣಸ್ವರೂಪನೂ ಆದ ಭಗವಾನ್ ಕೃಷ್ಣದ್ವೈಪಾಯನನಿಂದ ಈ ...ವು ರಚಿಸಲ್ಪಟ್ಟಿತು ; ಸರ್ವಫಲಸಿದ್ಧಿಗಾಗಿ ಎಲ್ಲರೂ ಇದನ್ನು ಆದರದಿಂದ ...ಬೇಕು'[1] ಎಂದು ಹೇಳಿರುತ್ತಾರೆ. ಸಹಸ್ರಮೂರ್ತಿಯಾದ ಪುರು...ತ್ತಮನ ಸಹಸ್ರನಾಮವು ಮಹಾಭಾರತದ ಆನುಶಾಸನಿಕ ಪರ್ವದ ...ನೆಯ ಅಧ್ಯಾಯದಲ್ಲಿ ಬರುತ್ತದೆ. ೧೪೨ ಶ್ಲೋಕಗಳನ್ನು ಒಳಕೊಂಡಿರುವ ...ಹಸ್ರನಾಮವು ಭೀಷ್ಮ-ಯುಧಿಷ್ಠಿರರ ಸಂವಾದರೂಪದಲ್ಲಿದೆ.

ಮೊದಲು ಯುಧಿಷ್ಠಿರನು ಆರು ಪ್ರಶ್ನೆಗಳನ್ನು ಕೇಳುತ್ತಾನೆ.

೧. ಲೋಕದಲ್ಲಿ ಅದ್ವಿತೀಯನಾದ ದೇವನು ಯಾರು ?

೨. ಏಕಪರಾಯಣವು ಯಾವುದು ?

೩-೪. ಮಾನವನು ಶುಭವನ್ನು ಹೊಂದಲು ಯಾರನ್ನು ಸ್ತುತಿಸಬೇಕು ಮತ್ತು ಯಾರನ್ನು ಅರ್ಚಿಸಬೇಕು ?

೫. ಸರ್ವಧರ್ಮಗಳಲ್ಲಿ ಯಾವ ಧರ್ಮವು ಶ್ರೇಷ್ಠವೆಂದು ನೀನು ಎಣಿಸುತ್ತೀಯೆ ?

೬. ಯಾವುದನ್ನು ಜಪಿಸುತ್ತ ಮಾನವನು ಜನ್ಮಸಂಸಾರಬಂಧನದಿಂದ ಮುಕ್ತನಾಗುತ್ತಾನೆ ?[2]

ಜಪ್ಯವಿಷಯವಾದ ಆರನೆಯ ಪ್ರಶ್ನೆಯ ಉತ್ತರವು ನಾಲ್ಕನೆಯ ಶ್ಲೋಕ... ಇರುವುದೆಂದೂ,[3] ನಾಲ್ಕನೆಯ ಪ್ರಶ್ನೆ...ಯ ಉತ್ತರವು ಐದನೆಯ ಶ್ಲೋಕ...

---

1. 'ಇಮಂ ಸ್ತವಮ್' ಇತ್ಯಾದಿನಾ ಸಹಸ್ರಶಾಖಾಜ್ಞೇನ ಸರ್ವಜ್ಞೇನ ಭಗವತಾ ...ದ್ವೈಪಾಯನೇನ ಸಾಕ್ಷಾನ್ನಾರಾಯಣೇನ ಕೃತಮಿತಿ ಸರ್ವೈರೇವ ಅರ್ಥಿಭಿಃ ...ರಂ ಪಠಿತವ್ಯಂ ಸರ್ವಫಲಸಿದ್ಧಯ ಇತಿ ದರ್ಶಯತಿ। (೧೪೧ನೆಯ ಶ್ಲೋಕದ ...)

2. ಕಿಮೇಕಂ ದೈವತಂ ಲೋಕೇ ಕಿಂ ವಾಪ್ಯೇಕಂ ಪರಾಯಣಮ್ ।
ಸ್ತುವಂತಃ ಕಂ ಕಮರ್ಚಂತಃ ಪ್ರಾಪ್ನುಯುರ್ಮಾನವಾಃ ಶುಭಮ್ ॥ ೨ ॥
ಕೋ ಧರ್ಮಃ ಸರ್ವಧರ್ಮಾಣಾಂ ಭವತಃ ಪರಮೋ ಮತಃ ।
ಕಿಂ ಜಪನ್ ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥ ೩ ॥

3. ಜಗತ್ಪ್ರಭುಂ ದೇವದೇವಮನಂತಂ ಪುರುಷೋತ್ತಮಮ್ ।
ಸ್ತುವನ್ನಾಮಸಹಸ್ರೇಣ ಪುರುಷಃ ಸತತೋತ್ಥಿತಃ ॥ ೪ ॥

ದಲ್ಲಿ ಇರುವುದೆಂದೂ,[1] ಮೂರನೆಯ ಪ್ರಶ್ನೆಯ ಉತ್ತರವು ಆರನೆಯ ಶ್ಲೋಕದ ಮೂರು ಪಾದಗಳಲ್ಲಿ ಇರುವುದೆಂದೂ,[2] ಐದನೆಯ ಪ್ರಶ್ನೆಯ ಉತ್ತರವು ಎಂಟನೆಯ ಶ್ಲೋಕದಲ್ಲಿ ಇರುವುದೆಂದೂ,[3] ಎರಡನೆಯ ಪ್ರಶ್ನೆಯ ಉತ್ತರವು ಒಂಭತ್ತನೆಯ ಶ್ಲೋಕದಲ್ಲಿ ಇರುವುದೆಂದೂ,[4] ಮೊದಲನೆಯ ಪ್ರಶ್ನೆಯ ಉತ್ತರವು ಹತ್ತನೆಯ ಶ್ಲೋಕದಲ್ಲಿ ಇರುವುದೆಂದೂ[5] ಶ್ರೀಶಂಕರಾಚಾರ್ಯರು ತಮ್ಮ ಭಾಷ್ಯಾವತರಣಿಕೆಯಲ್ಲಿ ತಿಳಿಸಿರುತ್ತಾರೆ. ಆರನೆಯ ಪ್ರಶ್ನೆಗೆ ಉತ್ತರವಾದ ನಾಲ್ಕನೆಯ ಶ್ಲೋಕದಲ್ಲಿ ಉಲ್ಲೇಖಿತವಾಗಿರುವ ಪುರುಷೋತ್ತಮನ 'ನಾಮಸಹಸ್ರವು' ವಿಷ್ಣುವಿನ ಸಹಸ್ರನಾಮಗಳು. ಈ ಸಹಸ್ರನಾಮಗಳನ್ನೇ ಪಠಿಸುತ್ತ ಜಪಿಸುತ್ತ ಸರ್ವದುಃಖಗಳನ್ನು ದಾಟುತ್ತಾನೆಂದು 'ಒಳಗಿನ ಮತ್ತು ಹೊರಗಿನ ಸಮಸ್ತ ಶತ್ರುಗಳಿಗೂ ಭಯಂಕರನೂ, ಮೋಕ್ಷಧರ್ಮಾದಿಗಳ ವಕ್ತೃವೂ, ಸರ್ವಜ್ಞನೂ'[6] ಆದ ಭೀಷ್ಮನು ಯುಧಿಷ್ಠಿರನಿಗೆ ಉಪದೇಶಿಸಿ ಸಹಸ್ರನಾಮಗಳನ್ನು ಹೇಳುತ್ತಾನೆ.

ಈ ಸ್ತುತಿರೂಪವಾದ ಅರ್ಚನೆಗೆ ಅಧಿಕ ಮಾನ್ಯತೆಯನ್ನು ಕೊಡಲು ಏನು ಕಾರಣ ಎಂಬ ಪ್ರಶ್ನೆಗೆ ಶ್ರೀಮದಾಚಾರ್ಯರೇ ಉತ್ತರವನ್ನು ಕೊಟ್ಟಿರುತ್ತಾರೆ :

೧. ಇದರಲ್ಲಿ ಇತರ ಪ್ರಾಣಿಗಳಿಗೆ ಹಿಂಸೆಯಿಲ್ಲ.

೨. ಇತರ ಮನುಷ್ಯರ ಅಥವಾ ದ್ರವ್ಯದ ಆವಶ್ಯಕತೆಯಿಲ್ಲ.

---

1. ತಮೇವ ಚಾರ್ಚಯನ್ನಿತ್ಯಂ ಭಕ್ತ್ಯಾ ಪುರುಷಮವ್ಯಯಮ್ ।
ಧ್ಯಾಯಂಸ್ತುವನ್ನಮಸ್ಯಂಶ್ಚ ಯಜಮಾನಸ್ತಮೇವ ಚ ॥ ೫ ॥
2. ಅನಾದಿನಿಧನಂ ವಿಷ್ಣುಂ ಸರ್ವಲೋಕಮಹೇಶ್ವರಮ್ ।
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ ಸರ್ವದುಃಖಾತಿಗೋ ಭವೇತ್ ॥ ೬ ॥
3. ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ ।
ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ ॥ ೮ ॥
4. ಪರಮಂ ಯೋ ಮಹತ್ತೇಜಃ ಪರಮಂ ಯೋ ಮಹತ್ತಪಃ ।
ಪರಮಂ ಯೋ ಮಹದ್ಬ್ರಹ್ಮ ಪರಮಂ ಯಃ ಪರಾಯಣಮ್ ॥ ೯ ॥
5. ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್ ।
ದೈವತಂ ದೇವತಾನಾಂ ಚ ಭೂತಾನಾಂ ಯೋಽವ್ಯಯಃ ಪಿತಾ ॥ ೧೦ ॥
6. ಸರ್ವೇಷಾಂ ಬಹಿರಂತಶ್ಶತ್ರೂಣಾಂ ಭಯಹೇತುರ್ಭೀಷ್ಮಃ ಮೋಕ್ಷಧರ್ಮಾದೀನಾಂ ಪ್ರವಕ್ತಾ ಸರ್ವಜ್ಞಃ । (ನಾಲ್ಕನೆಯ ಶ್ಲೋಕದ ಭಾಷ್ಯ.)

### ೩. ದೇಶಕಾಲಾದಿಗಳ ನಿಯಮವಿಲ್ಲ.[1]

'ಕೃತಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ಯಜ್ಞದಿಂದಲೂ, ದ್ವಾಪರಯುಗದಲ್ಲಿ ಅರ್ಚನೆಯಿಂದಲೂ ಯಾವುದನ್ನು ಹೊಂದಬಹುದೋ ಅದನ್ನು ಕಲಿಯುಗದಲ್ಲಿ ಕೇಶವನ ಸಂಕೀರ್ತನೆಯಿಂದಲೇ ಹೊಂದಬಹುದು'[2] ಎಂದು ಪುರಾಣರತ್ನವಾದ ವಿಷ್ಣುಪುರಾಣವೇ ಹೇಳಿದೆ. 'ಯಜ್ಞಗಳಲ್ಲಿ ನಾನು ಜಪಯಜ್ಞ'[3] ಎಂದು ಭಗವದ್ವಚನವೇ ಉಂಟು. ಸಹಸ್ರನಾಮದ ಜಪವು ಈ ಯುಗದಲ್ಲಿ ಅತ್ಯಂತ ಉತ್ತಮವಾದ ಸಾಧನವೆಂಬ ದೃಢನಂಬಿಕೆಯಿಂದ ಶ್ರೀಮದಾಚಾರ್ಯರು ನಾಮಭಾಷ್ಯವನ್ನು ಬರೆದಿರುವರೆಂಬುದು ಅವರ ಅವತರಣಿಕೆಯಿಂದಲೇ ಸ್ಪಷ್ಟವಾಗಿದೆ.

ನಾಮಗಳ ಅರ್ಥವನ್ನು ತಿಳಿದುಕೊಳ್ಳುವಾಗ ಒಂದು ವಿಷಯವನ್ನು ನಾವು ನೆನಪಿನಲ್ಲಿ ಇಡಬೇಕು: ಸಹಸ್ರನಾಮದಲ್ಲಿ 'ಆದಿತ್ಯ' ಮೊದಲಾದ ನಾಮಗಳು ಬಂದಾಗ ಅವು ಪ್ರಸಿದ್ಧವಾದ ಭೌತಿಕವಸ್ತುಗಳನ್ನು ಸೂಚಿಸಿದರೂ ಆದಿತ್ಯಾದಿಗಳು ಭಗವಂತನ ವಿಭೂತಿಯಾದ ಕಾರಣ ಅವನಿಂದ ಭಿನ್ನವಲ್ಲ. ಪ್ರಸಿದ್ಧಾರ್ಥವನ್ನೇ ಗ್ರಹಿಸಿದರೂ ಅವು ಭಗವಂತನ ಸ್ತುತಿಯಾಗುತ್ತದೆಂದು ಶ್ರೀಮದಾಚಾರ್ಯರು ತಿಳಿಸಿ ವಿಷ್ಣುಪುರಾಣದ ಎರಡು ಶ್ಲೋಕಗಳನ್ನು[4] ಪ್ರಮಾಣವಾಗಿ ಉದಾಹರಿಸಿದ್ದಾರೆ.

> ಭೂತಾತ್ಮ, ಇಂದ್ರಿಯಾತ್ಮ, ಪ್ರಧಾನಾತ್ಮ, ಜೀವಾತ್ಮ ಮತ್ತು ಪರಮಾತ್ಮ— ಇವೆಲ್ಲವೂ ನೀನೇ. ನಕ್ಷತ್ರಗಳೂ ವಿಷ್ಣುವೇ, ಲೋಕಗಳೂ ವಿಷ್ಣುವೇ, ವನಗಿರಿಗಳೂ ವಿಷ್ಣುವೇ, ದಿಕ್ಕುಗಳೂ ವಿಷ್ಣುವೇ; ಹೇ ವಿಪ್ರವರ್ಯ, ಇರುವುದು, ಇಲ್ಲದಿರುವುದು—ಎಲ್ಲವೂ ಅವನೇ.

---

1. ಹಿಂಸಾದಿಪುರುಷಾಂತರದ್ರವ್ಯಾಂತರದೇಶಕಾಲಾದಿನಿಯಮಾನಪೇಕ್ಷತ್ವಮ್ ಆಧಿಕ್ಯೇ ಕಾರಣಮ್ । (ಎಂಟನೆಯ ಶ್ಲೋಕದ ಭಾಷ್ಯ.)
2. ಧ್ಯಾಯನ್ ಕೃತೇ ಯಜನ್ ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್। ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥ (೬. ೨. ೧೭)
3. ಯಜ್ಞಾನಾಂ ಜಪಯಜ್ಞೋಽಸ್ಮಿ (ಗೀತಾ. ೧೦. ೨೫)
4. ಭೂತಾತ್ಮಾ ಚೇಂದ್ರಿಯಾತ್ಮಾ ಚ ಪ್ರಧಾನಾತ್ಮಾ ತಥಾ ಭವಾನ್ ।
   ಆತ್ಮಾ ಚ ಪರಮಾತ್ಮಾ ಚ ತ್ವಮೇಕಃ ಪಂಚಧಾ ಸ್ಥಿತಃ ॥ (೫. ೧೮. ೫೦)
   ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯೋ ದಿಶಶ್ಚ।
   ನದ್ಯಃ ಸಮುದ್ರಾಶ್ಚ ಸ ಏವ ಸರ್ವಂ ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ॥
   (೨. ೧೨. ೩೮)

ಕೆಲವು ವಿಮರ್ಶಕರು ಪುನರುಕ್ತಿಯ ದೋಷವನ್ನು ಸಹಸ್ರನಾಮದಲ್ಲಿ ಕಂಡುಹಿಡಿದಿರುತ್ತಾರೆ. ನಾಮಗಳ ಅರ್ಥವೈವಿಧ್ಯವನ್ನೂ ಆಳವನ್ನೂ ಸೂಕ್ಷ್ಮ ವಾಗಿ ನೋಡದಿರುವುದೇ ಇದಕ್ಕೆ ಕಾರಣ. ಸಹಸ್ರನಾಮದ ಸಾಹಿತ್ಯರೂಪವು ಗೀರ್ವಾಣಭಾಷೆಗೆ ವಿಶೇಷವಾದುದು. 'ಸೂತ್ರ' ಸಾಹಿತ್ಯದಂತೆ ಇದರಲ್ಲಿ ಅರ್ಥಕ್ಕೆ ಅಥವಾ ಅನ್ವಯಕ್ಕೆ ಆವಶ್ಯಕವಾದ ಅನೇಕ ಪದಗಳು ಬಿಟ್ಟುಹೋಗಿರುತ್ತವೆ. ಜ್ಞಾಪಕಶಕ್ತಿಗೆ ಅನುಕೂಲವಾಗುವಂತೆ ಬಹಳ ಮಿತವಾದ ಪದಗಳಿಂದ ಸಹಸ್ರನಾಮಸಾಹಿತ್ಯವು ರಚಿಸಲ್ಪಟ್ಟಿದೆ. ಕವಿಯು ತನ್ನ ಭಾವಗಳನ್ನೂ ರಸಗಳನ್ನೂ ತತ್ತ್ವಗಳನ್ನೂ ಭಗವಂತನ ನಾಮಗಳ ಮೂಲಕವೇ ಬಹಳ ಮಿತವಾಗಿ ಹೇಳಬೇಕು. ಇಲ್ಲಿ ಮಾತುಗಳನ್ನು ಬೆಳೆಸಲು ಸ್ಥಾನವಿಲ್ಲ. 'ವಿಷ್ಣು' ಮೊದಲಾದ ಶಬ್ದಗಳು ಅನೇಕ ಸಲ ಬಂದರೂ, ವೃತ್ತಿಭೇದದಿಂದ ಅರ್ಥಭೇದ ವಾಗುವ ಕಾರಣ ಪುನರುಕ್ತಿಯ ದೋಷವಿಲ್ಲವೆಂದು ಶ್ರೀಮದಾಚಾರ್ಯರು ಹೇಳಿರುತ್ತಾರೆ. ಸಹಸ್ರನಾಮಗಳುಳ್ಳ ಒಂದೇ ದೇವತೆ ಯಾವುದೆಂದು ಪ್ರಶ್ನಿಸಿರುವುದರಿಂದ ಅರ್ಥವು ಒಂದೇ ಆಗಿದ್ದರೂ ಪುನರುಕ್ತಿಯ ದೋಷವಿಲ್ಲ.

ವಿಷ್ಣುಸಹಸ್ರನಾಮವು ಜನಪ್ರಿಯವಾದ ಗ್ರಂಥ. ಇದಕ್ಕೆ ಹದಿನೈದು ಭಾಷ್ಯಗಳಿವೆಯೆಂದು ದಿವಂಗತ ಶ್ರೀ ಆರ್. ಅನಂತಕೃಷ್ಣಶಾಸ್ತ್ರಿಗಳು ತಮ್ಮ ಸಹಸ್ರನಾಮದ ಆಂಗ್ಲಾನುವಾದದ ಮುನ್ನುಡಿಯಲ್ಲಿ ಹೇಳಿರುತ್ತಾರೆ. ಇತ್ತೀಚೆಗೆ ಇನ್ನೂ ಅನೇಕ ಭಾಷ್ಯಗಳು ಸಿಕ್ಕಿವೆ. ವಿಷ್ಣುಸಹಸ್ರನಾಮದ ಶಾಂಕರ ಭಾಷ್ಯದ ಹಸ್ತಪ್ರತಿಗಳು ಇಡಿಯ ಭಾರತದಲ್ಲೆಲ್ಲ ತಮಗೆ ಸಿಕ್ಕಿವೆಯೆಂದೂ, ಕೆಲವು ಪ್ರತಿಗಳು ಕ್ರಿ.ಶ. ಹದಿನಾಲ್ಕನೆಯ ಮತ್ತು ಹದಿನೈದನೆಯ ಶತಮಾನ ಗಳಿಗೆ ಸೇರಿದುವೆಂದೂ ಶ್ರೀ ಅನಂತಕೃಷ್ಣಶಾಸ್ತ್ರಿಗಳು ಹೇಳಿರುತ್ತಾರೆ. ಇದ ರಿಂದ ಶ್ರೀಮದಾಚಾರ್ಯರ ನಾಮಭಾಷ್ಯವು ದೇಶದಾದ್ಯಂತ ಎಷ್ಟು ಪ್ರಿಯ ವಾಗಿರುವುದೆಂದು ನಮಗೆ ತಿಳಿದುಬರುತ್ತದೆ. ಸಹಸ್ರನಾಮವು ಅದ್ವೈತ ಸಂಪ್ರದಾಯದಲ್ಲಿ ಶ್ರೇಷ್ಠತೆಯನ್ನು ಪಡೆದಿರುವಂತೆ ದ್ವೈತವಿಶಿಷ್ಟಾದ್ವೈತ ಸಂಪ್ರದಾಯಗಳಲ್ಲಿಯೂ ಪ್ರಾಧಾನ್ಯವನ್ನು ಪಡೆದಿದೆ.

ಶ್ರೀಮದ್ರಾಮಾನುಜಾಚಾರ್ಯರು ಮಾಡಿದ ಮೂರು ಪ್ರತಿಜ್ಞೆಗಳಲ್ಲಿ ಶ್ರೀಪರಾಶರಋಷಿಗಳ ಹೆಸರನ್ನು ಚಿರಸ್ಮರಣೀಯವಾಗಿ ಮಾಡುವುದು ಒಂದಾ ಗಿತ್ತು. ಇವರು ತಮ್ಮ ಪ್ರತಿಜ್ಞೆಯನ್ನು ನೆರವೇರಿಸಲು ತಮ್ಮ ಶಿಷ್ಯನಾದ ಕೂರೇಶನ ಮಗನಿಗೆ ಪರಾಶರನೆಂಬ ಹೆಸರನ್ನು ಕೊಟ್ಟು ಅವನು ಮುಂದೆ ವಿಷ್ಣುಸಹಸ್ರನಾಮದ ಭಾಷ್ಯವನ್ನು ಬರೆಯುವಂತೆ ಪ್ರೇರಿಸಿದರು. ಇವರೇ

ಪ್ರಸಿದ್ಧರಾದ ಪರಾಶರಭಟ್ಟರು. ಪರಾಶರಭಟ್ಟರ ಭಗವದ್ಗುಣದರ್ಪಣವೆಂಬ ಸಹಸ್ರನಾಮಭಾಷ್ಯವು ಶ್ರೀವೈಷ್ಣವಸಂಪ್ರದಾಯದಲ್ಲಿ ಅತ್ಯಂತ ಆದರಣೀಯ ವಾಗಿದೆ. ಈ ಭಾಷ್ಯದ ಬಗ್ಗೆ ಶ್ರೀ ಅನಂತಕೃಷ್ಣಶಾಸ್ತ್ರಿಗಳು ಹೀಗೆ ಹೇಳಿರು ತ್ತಾರೆ: It completely traces out all the grammatical forms of the names with their respective references.

ಸಹಸ್ರನಾಮವು ಹಿಂದೆ ಹೇಳಿದಂತೆ ಒಬ್ಬನೇ ದೇವನ ಸಾವಿರಾರು ವಿಶೇಷಣಗಳನ್ನೂ ಲಕ್ಷಣಗಳನ್ನೂ ತಿಳಿಸುತ್ತದೆ. ಯಾವ ವಿಶೇಷಣವೂ ಭಗವಂತನ ವಿಭೂತಿಯನ್ನು ಮಿತಗೊಳಿಸುವುದಿಲ್ಲ; ಒಂದು ವಿಶೇಷಣವು ಇನ್ನೊಂದು ವಿಶೇಷಣವನ್ನು ವಿರೋಧಿಸುವುದಿಲ್ಲ. ನಮ್ಮ ಮನಸ್ಸಿಗೆ ನಿಲು ಕುವ ಸಮಸ್ತ ಭಾವನೆಗಳು ಭಗವಂತನಲ್ಲಿ ಪರ್ಯವಸಾನವನ್ನು ಹೊಂದು ತ್ತವೆ. ಅವನು ಅಮೂರ್ತಿಯಾದರೂ ಅನೇಕಮೂರ್ತಿ, ಪರಮಾರ್ಥತಃ ಏಕನಾದರೂ ಬಹುರೂಪವುಳ್ಳವನು. ನಿರ್ಗುಣನಾದರೂ ಸುವರ್ಣವರ್ಣವುಳ್ಳ ವನು, ಹೇಮಾಂಗನು, ವರಾಂಗನು; ಅವ್ಯಕ್ತನಾದರೂ ಪುರುಷೋತ್ತಮನೆಂದು ವ್ಯಕ್ತಿತ್ವವನ್ನು ಪಡೆದಿರುತ್ತಾನೆ; ಅಪ್ರಮೇಯನಾದರೂ ಸ್ತವಪ್ರಿಯನು; ಶ್ರೀಶ, ಶ್ರೀನಿವಾಸ ಮೊದಲಾದ ನಾಮಗಳು ಅವನ ಶ್ರಿಯಃಪತಿತ್ವವನ್ನು ಸೂಚಿಸುತ್ತವೆ; ಸುಂದರ ರತ್ನನಾಭ ಸುಲೋಚನ ಮೊದಲಾದ ನಾಮಗಳು ಅವನು ಧ್ಯಾನಗಮ್ಯನೆಂದು ತಿಳಿಸುತ್ತವೆ. ಯೋಗ, ಯೋಗವಿದರ ನೇತೃ ಯೋಗಿ ಮೊದಲಾದ ನಾಮಗಳು ಅವನಿಗೂ ಯೋಗಕ್ಕೂ ಇರುವ ನಿಕಟ ಸಂಬಂಧವನ್ನು ಸೂಚಿಸುತ್ತವೆ. ಅವನೇ ಪ್ರಕೃತಿಗೂ ಜೀವರಿಗೂ ಸ್ವಾಮಿ.

ಭಗವಂತನ ಕಲ್ಯಾಣಗುಣಗಣಗಳನ್ನು ನಿರೂಪಿಸುವ ಸಹಸ್ರನಾಮವು ಒಂದು ಮಾನಸತೀರ್ಥ. ಇದರಲ್ಲಿ ಮಿಂದವರು ವಿರಜರಾಗುತ್ತಾರೆ. ಕೇವಲ ಬಾಹ್ಯಸ್ನಾನದಿಂದ ಅಂತರಾತ್ಮವು ಶುದ್ಧವಾಗುವುದಿಲ್ಲ. ನಾಮಜಪಕ್ಕೆ ಅನು ರೂಪವಾಗಿ ಮಹಾಭಾರತವು ಹೇಳಿರುವ ಕೆಲವು ಶ್ಲೋಕಗಳನ್ನು ಶ್ರೀಮದಾ ಚಾರ್ಯರು ಹೀಗೆ ಉಲ್ಲೇಖಿಸಿರುತ್ತಾರೆ:

> ಯಾವುದರಲ್ಲಿ ಸ್ನಾನಮಾಡಿ ದೇವತೆಗಳೂ ವೇದಗಳೂ ಪವಿತ್ರತೆಯನ್ನು ಮತ್ತು ಪೂರ್ಣವಾದ ಏಕತ್ವವನ್ನು ಹೊಂದುವರೊ ಅದೇ ಮಾನಸತೀರ್ಥ; ಅದರಲ್ಲಿ ಸ್ನಾನಮಾಡಿ ಮಾನವನು ಅಮೃತನಾಗುತ್ತಾನೆ. ಮಾನಸತೀರ್ಥದ ಜ್ಞಾನವೆಂಬ ಸರೋವರದಲ್ಲಿ, ರಾಗದ್ವೇಷಗಳನ್ನು ನಾಶಮಾಡುವ ಧ್ಯಾನಜಲ ದಲ್ಲಿ ಸ್ನಾನಮಾಡುವವನು ಪರಮಗತಿಯನ್ನು ಹೊಂದುತ್ತಾನೆ. ಆತ್ಮವೆಂಬ

ನದಿಯು ಸಂಯಮತೋಯದಿಂದ ತುಂಬಿದೆ; ಸತ್ಯವೇ ಅದರ ಆಳ; ಶೀಲವೇ ಅದರ ದಡ; ದಯೆಯೇ ಅದರ ತರಂಗ. ಹೇ ಪಾಂಡುಪುತ್ರ, ಅದರಲ್ಲಿ ಸ್ನಾನಮಾಡು, ಅಂತರಾತ್ಮವು ಬರಿಯ ನೀರಿನಿಂದ ಶುದ್ಧವಾಗುವುದಿಲ್ಲ.[1]

ಎಲ್ಲ ಸ್ತೋತ್ರಪಾಠಕರು ಈ ಮಾನಸತೀರ್ಥದಲ್ಲಿ ಮಿಂದು ಪವಿತ್ರರಾಗಲಿ.

ವಿಷ್ಣುಸಹಸ್ರನಾಮವನ್ನು ಸರಳ ಕನ್ನಡಕ್ಕೆ ಬಹಳ ಚೆನ್ನಾಗಿ ಅನುವಾದ ಮಾಡಿರುವ ಸ್ವಾಮೀ ವಿಜ್ಞಾನಂದರನ್ನು ನಾನು ಅಭಿನಂದಿಸುತ್ತೇನೆ. ನಾಮಗಳನ್ನು ಅನುವಾದಿಸುವಾಗ ಅವರು ಮುಖ್ಯವಾಗಿ ಶಾಂಕರಭಾಷ್ಯವನ್ನು ಅವಲಂಬಿಸಿರುತ್ತಾರೆ.

ಶ್ರೀರಾಮಕೃಷ್ಣಾಶ್ರಮ
ಮಂಗಳೂರು
೧-೮-೧೯೫೭

ಸ್ವಾಮೀ ಆದಿದೇವಾನಂದ

---

1. ಯಸ್ಮಿನ್ ದೇವಾಶ್ಚ ವೇದಾಶ್ಚ ಪವಿತ್ರಂ ಕೃತ್ಸ್ನಮೇಕತಾಮ್ ।
ಪ್ರಜೇತ್ತನ್ಮಾನಸಂ ತೀರ್ಥಂ ತತ್ರ ಸ್ನಾತ್ವಾಽಮೃತೋ ಭವೇತ್ ॥
ಜ್ಞಾನಹ್ರದೇ ಧ್ಯಾನಜಲೇ ರಾಗದ್ವೇಷಮಲಾಪಹೇ ।
ಯಃ ಸ್ನಾತಿ ಮಾನಸೇ ತೀರ್ಥೇ ಸ ಯಾತಿ ಪರಮಾಂ ಗತಿಮ್ ॥
ಆತ್ಮಾ ನದೀ ಸಂಯಮತೋಯಪೂರ್ಣಾ ಸತ್ಯಹ್ರದಾ ಶೀಲತಟಾ ದಯೋರ್ಮಿಃ।
ತತ್ರಾವಗಾಹಂ ಕುರು ಪಾಂಡುಪುತ್ರ ನ ವಾರಿಣಾ ಶುದ್ಧ್ಯತಿ ಚಾಂತರಾತ್ಮಾ ॥

# ಮಂಗಲಶ್ಲೋಕಾಃ

## ಶ್ರೀಪರಮಾತ್ಮನೇ ನಮಃ

**ಸಚ್ಚಿದಾನಂದರೂಪಾಯ ಕೃಷ್ಣಾಯಾಕ್ಲಿಷ್ಟಕಾರಿಣೇ ।**
**ನಮೋ ವೇದಾಂತವೇದ್ಯಾಯ ಗುರವೇ ಬುದ್ಧಿಸಾಕ್ಷಿಣೇ ॥ ೧ ॥**

ಸಚ್ಚಿದಾನಂದರೂಪನೂ, ಅಕ್ಲಿಷ್ಟಕಾರಿಯೂ[1], ವೇದಾಂತವೇದ್ಯನೂ, ಬುದ್ಧಿಸಾಕ್ಷಿಯೂ[2], ಗುರುವೂ ಆಗಿರುವ ಶ್ರೀಕೃಷ್ಣನಿಗೆ ನಮಸ್ಕಾರ.

**ಕೃಷ್ಣದ್ವೈಪಾಯನಂ ವ್ಯಾಸಂ ಸರ್ವಲೋಕಹಿತೇ ರತಮ್ ।**
**ವೇದಾಬ್ಜಭಾಸ್ಕರಂ ವಂದೇ ಶಮಾದಿನಿಲಯಂ ಮುನಿಮ್ ॥ ೨ ॥**

ಸರ್ವಲೋಕಹಿತದಲ್ಲಿ ತತ್ಪರನೂ, ವೇದರೂಪವಾದ ತಾವರೆಗೆ ಸೂರ್ಯನಂತಿರುವವನೂ, ಶಮಾದಿಗಳಿಗೆ ಆಶ್ರಯನೂ, ಮುನಿಯೂ ಆದ ಶ್ರೀಕೃಷ್ಣದ್ವೈಪಾಯನ ವ್ಯಾಸನಿಗೆ ನಮಸ್ಕರಿಸುತ್ತೇನೆ.

**ಸಹಸ್ರಮೂರ್ತೇಃ ಪುರುಷೋತ್ತಮಸ್ಯ**
**ಸಹಸ್ರನೇತ್ರಾನನಪಾದಬಾಹೋಃ ।**
**ಸಹಸ್ರನಾಮ್ನಾಂ ಸ್ತವನಂ ಪ್ರಶಸ್ತಂ**
**ನಿರುಚ್ಯತೇ ಜನ್ಮಜರಾದಿಶಾಂತ್ಯೈ ॥ ೩ ॥**

ಸಹಸ್ರಮೂರ್ತಿಯೂ, ಸಹಸ್ರ ನೇತ್ರಗಳು ಮುಖಗಳು ಕಾಲುಗಳು ಮತ್ತು ಕೈಗಳು ಉಳ್ಳವನೂ ಆಗಿರುವ ಶ್ರೀಪುರುಷೋತ್ತಮನ ಸಹಸ್ರನಾಮಗಳ ಪ್ರಶಸ್ತವಾದ ಸ್ತೋತ್ರವು ಜನನ, ಮುಪ್ಪು ಮೊದಲಾದುವುಗಳ ನಿವಾರಣೆಗಾಗಿ ವ್ಯಾಖ್ಯಾನಮಾಡಲ್ಪಡುತ್ತದೆ.

---

1. ಆಯಾಸವಿಲ್ಲದೆಯೇ ತನ್ನ ಕರ್ಮಗಳನ್ನು ಮಾಡುವವನು.
2. ಬುದ್ಧಿಗೆ ಸಾಕ್ಷಿಯಾಗಿರುವವನು.

# ಶ್ರೀವಿಷ್ಣುಸಹಸ್ರನಾಮಸ್ತೋತ್ರಃ

ವೈಶಂಪಾಯನನು ಜನಮೇಜಯನಿಗೆ ಹೇಳಿದನು—

**ಶ್ರುತ್ವಾ ಧರ್ಮಾನಶೇಷೇಣ ಪಾವನಾನಿ ಚ ಸರ್ವಶಃ ।**
**ಯುಧಿಷ್ಠಿರಃ ಶಾಂತನವಂ ಪುನರೇವಾಭ್ಯಭಾಷತ ॥ ೧ ॥**

ಧರ್ಮಪುತ್ರನಾದ ಯುಧಿಷ್ಠಿರನು (ಅಭ್ಯುದಯನಿಃಶ್ರೇಯಸ್ಸುಗಳ ಉತ್ಪತ್ತಿಗೆ ಕಾರಣಗಳಾದ ಮತ್ತು ವಿಧಿರೂಪವಾದುವುಗಳಾದ) ಧರ್ಮಗಳನ್ನು ಸಂಪೂರ್ಣವಾಗಿಯೂ ಮತ್ತು ಪಾವನಗಳಾದ (ಪಾಪಕ್ಷಯವನ್ನುಂಟು ಮಾಡುವ) ಧರ್ಮರಹಸ್ಯಗಳನ್ನು ಸರ್ವಪ್ರಕಾರದಿಂದಲೂ ಭೀಷ್ಮನಿಂದ ಕೇಳಿ, (ಅಲ್ಪಪ್ರಯಾಸಕರವೂ, ಸುಲಭವಾಗಿ ಹೊಂದಲ್ಪಡುವಂತಹದೂ, ಅಧಿಕಫಲವುಳ್ಳದ್ದೂ ಆದ ಸಕಲಪುರುಷಾರ್ಥಸಾಧನವು ಭೀಷ್ಮನಿಂದ ಇಷ್ಟರ ವರೆಗೆ ಹೇಳಲ್ಪಟ್ಟಿಲ್ಲವೆಂದು) ಶಂತನುಸುತನಾದ ಭೀಷ್ಮನನ್ನು ಪುನಃ ಪ್ರಶ್ನೆ ಮಾಡಿದನು.

ಯುಧಿಷ್ಠಿರನು ಹೇಳಿದನು—

**ಕಿಮೇಕಂ ದೈವತಂ ಲೋಕೇ ಕಿಂ ವಾಪ್ಯೇಕಂ ಪರಾಯಣಮ್ ।**
**ಸ್ತುವಂತಃ ಕಂ ಕಮರ್ಚಂತಃ ಪ್ರಾಪ್ನುಯುರ್ಮಾನವಾಃ ಶುಭಮ್ ॥ ೨ ॥**

ಲೋಕದಲ್ಲಿ (ಜ್ಞಾನಕ್ಕೆ ಹೇತುಭೂತಗಳಾದ ಸಮಸ್ತವಿದ್ಯೆಗಳಿಂದ ಪ್ರತಿಪಾದಿಸಲ್ಪಡುವ) ಏಕಮಾತ್ರನಾದ ದೇವನು ಯಾರು? ಮತ್ತು ಏಕಮಾತ್ರವೂ ಶ್ರೇಷ್ಠವೂ ಆದ ಆಶ್ರಯಸ್ಥಾನವಾದರೂ[1] ಯಾವುದು? ಯಾರ ಗುಣಸಂಕೀರ್ತನೆಯನ್ನು ಮಾಡಿ ಮತ್ತು ಯಾರ (ಬಾಹ್ಯಾಭ್ಯಂತರ) ಪೂಜೆಯನ್ನು (ಬಹುವಿಧವಾಗಿ) ಮಾಡಿ ಮನುಷ್ಯರು (ಸ್ವರ್ಗಾದಿಫಲರೂಪವಾದ) ಕಲ್ಯಾಣವನ್ನು ಹೊಂದುವರು?

1. ಯಾವುದನ್ನು ಪ್ರವೇಶಿಸಿದರೆ ಮನುಷ್ಯನಿಗೆ ಪುನರ್ಜನ್ಮವು ಇರುವುದಿಲ್ಲವೊ ಯಾವುದರ ಜ್ಞಾನಮಾತ್ರದಿಂದಲೇ ಆನಂದವು ಲಕ್ಷಣವಾಗಿ ಉಳ್ಳ ಮೋಕ್ಷವು ಲಭಿಸುವುದೋ, ಯಾವುದನ್ನು ತಿಳಿದರೆ ಮನುಷ್ಯನು ಯಾವುದಕ್ಕೂ ಹೆದರುವುದಿಲ್ಲವೋ, ಯಾವುದು ಶ್ರೇಷ್ಠವೂ ಹೊಂದಲ್ಪಡತಕ್ಕದ್ದೂ ಆಗಿರುವುದೋ, ಆ ಆಶ್ರಯಸ್ಥಾನವು.

**ಕೋ ಧರ್ಮಃ ಸರ್ವಧರ್ಮಾಣಾಂ ಭವತಃ ಪರಮೋ ಮತಃ ।**
**ಕಿಂ ಜಪನ್ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥ ೩ ॥**

ಸಮಸ್ತಧರ್ಮಗಳಲ್ಲಿ (ಪೂರ್ವೋಕ್ತಲಕ್ಷಣಗಳುಳ್ಳ) ಯಾವ ಧರ್ಮವು ಶ್ರೇಷ್ಠವಾದುದೆಂದು ನಿನ್ನ ಮತವು ? (ಜಪಿಸಲ್ಪಡತಕ್ಕದಾದ) ಯಾವುದನ್ನು (ಉಚ್ಚಸ್ವರದಿಂದಾಗಲಿ, ಸಣ್ಣಸ್ವರದಿಂದಾಗಲಿ ಅಥವಾ ಮಾನಸಿಕವಾಗಿ ಯಾಗಲಿ) ಜಪಿಸುತ್ತ (ಜನನಧರ್ಮವುಳ್ಳ) ಜೀವನು ಜನ್ಮಸಂಸಾರಬಂಧನ ದಿಂದ ಮುಕ್ತನಾಗುತ್ತಾನೆ ?

ಭೀಷ್ಮನು ಉತ್ತರ ಹೇಳಿದನು—

**ಜಗತ್ಪ್ರಭುಂ ದೇವದೇವಮನಂತಂ ಪುರುಷೋತ್ತಮಮ್ ।**
**ಸ್ತುವನ್ನಾಮಸಹಸ್ರೇಣ ಪುರುಷಃ ಸತತೋತ್ಥಿತಃ ॥ ೪ ॥**

(ಸ್ಥಾವರಜಂಗಮಾತ್ಮಕವಾದ) ಜಗತ್ತಿಗೆ ಪ್ರಭುವೂ, ಬ್ರಹ್ಮಾದಿದೇವತೆ ಗಳಿಗೆ ದೇವನೂ, ದೇಶತಃ ಕಾಲತಃ ಮತ್ತು ವಸ್ತುತಃ ಅಪರಿಚ್ಛಿನ್ನನೂ, ಕ್ಷರ-ಅಕ್ಷರಗಳಿಗಿಂತ ಶ್ರೇಷ್ಠನೂ ಆದ ಪುರುಷೋತ್ತಮನ ಗುಣಸಂಕೀರ್ತನೆ ಯನ್ನು ಸಹಸ್ರನಾಮಗಳಿಂದ ಮಾಡುವುದರಲ್ಲಿ ನಿರಂತರವಾಗಿ ಉದ್ಯುಕ್ತ ನಾಗಿರುವ ಮನುಷ್ಯನು (ಸಕಲದುಃಖಗಳನ್ನೂ ದಾಟಿ ಹೋಗುತ್ತಾನೆ.)

**ತಮೇವ ಚಾರ್ಚಯನ್ನಿತ್ಯಂ ಭಕ್ತ್ಯಾ ಪುರುಷಮವ್ಯಯಮ್ ।**
**ಧ್ಯಾಯಂಸ್ತುವನ್ನಮಸ್ಯಂಶ್ಚ ಯಜಮಾನಸ್ತಮೇವ ಚ ॥ ೫ ॥**

(ವಿನಾಶಕ್ರಿಯಾರಹಿತನಾದ) ಅದೇ ಪುರುಷೋತ್ತಮನ (ಬಾಹ್ಯಾ ಭ್ಯಂತರ) ಅರ್ಚನೆಯನ್ನು ಮತ್ತು ಧ್ಯಾನಸ್ತುತಿನಮಸ್ಕಾರಗಳ ಮೂಲಕ ಮಾನಸಿಕ ವಾಚಿಕ ಕಾಯಿಕ ಪೂಜೆಗಳನ್ನು ನಿತ್ಯವೂ ಭಕ್ತಿಯಿಂದ ಮಾಡುತ್ತ ಮನುಷ್ಯನು (ಸಮಸ್ತದುಃಖಗಳನ್ನು ದಾಟಿಹೋಗುತ್ತಾನೆ).

**ಅನಾದಿನಿಧನಂ ವಿಷ್ಣುಂ ಸರ್ವಲೋಕಮಹೇಶ್ವರಮ್ ।**
**ಲೋಕಾಧ್ಯಕ್ಷಂ ಸ್ತುವನ್ನಿತ್ಯಂ ಸರ್ವದುಃಖಾತಿಗೋ ಭವೇತ್ ॥ ೬ ॥**

ಷಡ್ಭಾವವಿಕಾರಗಳಿಂದ ವರ್ಜಿತನಾದ, ಸಕಲಲೋಕಗಳ ನಿಯಾಮಕ ರಾದ ಬ್ರಹ್ಮಾದಿಗಳಿಗೂ ಈಶ್ವರನಾದ, ಲೋಕಗಳನ್ನೆಲ್ಲ ಸ್ವಾಭಾವಿಕಜ್ಞಾನ

ದಿಂದ ಸಾಕ್ಷಾತ್ತಾಗಿ ನೋಡುವ, ಸರ್ವವ್ಯಾಪಿಯಾದ ವಿಷ್ಣುವನ್ನು ನಿತ್ಯವೂ ಸ್ತುತಿಸುತ್ತ ಮನುಷ್ಯನು ಆಧ್ಯಾತ್ಮಿಕವೇ ಮೊದಲಾದ ಸಮಸ್ತದುಃಖಗಳನ್ನೂ ದಾಟಿಹೋಗುತ್ತಾನೆ.

**ಬ್ರಹ್ಮಣ್ಯಂ ಸರ್ವಧರ್ಮಜ್ಞಂ ಲೋಕಾನಾಂ ಕೀರ್ತಿವರ್ಧನಮ್ ।**
**ಲೋಕನಾಥಂ ಮಹದ್ಭೂತಂ ಸರ್ವಭೂತಭವೋದ್ಭವಮ್ ॥ ೭ ॥**

ಜಗತ್ಕರ್ತೃವಾದ ಬ್ರಹ್ಮ, ಬ್ರಾಹ್ಮಣ, ತಪಸ್ಸು ಮತ್ತು ಶ್ರುತಿ ಇವರಿಗೆ ಹಿತವನ್ನುಂಟುಮಾಡುವವನೂ, ಸರ್ವಧರ್ಮಗಳನ್ನು ತಿಳಿದವನೂ, ಪ್ರಾಣಿಗಳ ಯಶಸ್ಸುಗಳನ್ನು ಸ್ವಶಕ್ತಿಪ್ರವೇಶದಿಂದ ವೃದ್ಧಿಗೊಳಿಸುವವನೂ, ಲೋಕನಾಥನೂ (ಎಂದರೆ ಲೋಕಗಳಿಂದ ಯಾಚಿಸಲ್ಪಡುವವನು, ಪೂಜಿಸಲ್ಪಡುವವನು ಅಥವಾ ಲೋಕಗಳನ್ನು ಆಳುವವನು) ಪರಮಾರ್ಥ ಸತ್ಯವಾಗಿರುವವನೂ ಮತ್ತು ತನ್ನ ಸಂನಿಧಿಮಾತ್ರದಿಂದ ಸರ್ವಭೂತಗಳ ಉತ್ಪತ್ತಿಯನ್ನು ಮಾಡುವವನೂ (ಆದ ವಿಷ್ಣುವನ್ನು ಸ್ತುತಿಸುತ್ತ ಮನುಷ್ಯನು ಸರ್ವದುಃಖಗಳನ್ನು ದಾಟಿಹೋಗುತ್ತಾನೆ).

**ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ ।**
**ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ ॥ ೮ ॥**

ಮನುಷ್ಯನು ಭಕ್ತಿಯಿಂದ ಹೃದಯಕಮಲದಲ್ಲಿ ಪ್ರಕಾಶಮಾನನಾದ ವಾಸುದೇವನನ್ನು ಗುಣಸಂಕೀರ್ತನರೂಪವಾದ ಸ್ತುತಿಗಳಿಂದ ಸತ್ಕಾರಪೂರ್ವಕವಾಗಿ ಯಾವಾಗಲೂ ಪೂಜಿಸಬೇಕು. ಇದೇ (ಹೀಗೆ ಪೂಜಿಸುವುದೇ) ವಿಧಿರೂಪವಾದ ಸರ್ವಧರ್ಮಗಳಲ್ಲಿ ಶ್ರೇಷ್ಠವಾದ ಧರ್ಮವೆಂದು ನನ್ನ ಮತವು.

**ಪರಮಂ ಯೋ ಮಹತ್ತೇಜಃ ಪರಮಂ ಯೋ ಮಹತ್ತಪಃ ।**
**ಪರಮಂ ಯೋ ಮಹದ್ಬ್ರಹ್ಮ ಪರಮಂ ಯಃ**
**ಪರಾಯಣಮ್ ॥ ೯ ॥**

ಯಾವನು ಪ್ರಕೃಷ್ಟವಾದ, ಬೃಹದಾಕಾರದ (ಚೈತನ್ಯರೂಪವಾದ ಮತ್ತು ಸರ್ವವನ್ನು ಪ್ರಕಾಶಿಸುವ) ತೇಜಸ್ಸಾಗಿರುವನೋ, ಯಾವನು ಅನವಚ್ಛಿನ್ನವಾದ ಐಶ್ವರ್ಯವುಳ್ಳವನೂ ಲೋಕಗಳನ್ನೆಲ್ಲ ಆಳುವವನೂ ಆಗಿರುವನೋ, ಯಾವನು ಸತ್ಯಾದಿಲಕ್ಷಣವುಳ್ಳ ಮಹದ್ಬ್ರಹ್ಮವಾಗಿರುವನೋ

ಮತ್ತು ಯಾವನು ಪ್ರಕೃಷ್ಟನಾದ ಮತ್ತು ಪುನರಾವೃತ್ತಿಯ (ಪುನಃ ಸಂಸಾರ ವನ್ನು ಹೊಂದುವುದರ) ಭಯವಿಲ್ಲದೆ ಪರಮಾಶ್ರಯವಾಗಿರುವನೋ (ಆ ದೇವನು ಸರ್ವಭೂತಗಳಿಗೆ ಪರಮಗತಿಯಾಗಿರುವನು.)

**ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್ ।**
**ದೈವತಂ ದೇವತಾನಾಂ ಚ ಭೂತಾನಾಂ ಯೋಽವ್ಯಯಃ**
**ಪಿತಾ ॥ ೧೦ ॥**

ಯಾವನು ಪವಿತ್ರರಲ್ಲಿ (ಎಂದರೆ ಪವಿತ್ರತೀರ್ಥಾದಿಗಳಲ್ಲಿ) ಪವಿತ್ರನೋ,[1] ಮಂಗಲಗಳಲ್ಲಿ ಮಂಗಲನೋ,[2] ದೇವತೆಗಳಿಗೆ ದೇವನೋ[3] ಮತ್ತು ಯಾವನು ಭೂತಗಳಿಗೆ ವ್ಯಯರಹಿತನಾದ ಜನಕನೋ (ಅವನೇ ಲೋಕದಲ್ಲಿ ಏಕ ಮಾತ್ರನಾದ ದೇವನು).

1. ಪರಮಪುರುಷನಾದ ಭಗವಂತನನ್ನು ಧ್ಯಾನಿಸಿದರೆ, ಸಾಕ್ಷಾತ್ಕರಿಸಿದರೆ, ಸ್ತುತಿಸಿದರೆ, ಪೂಜಿಸಿದರೆ, ಸ್ಮರಿಸಿದರೆ ಮತ್ತು ನಮಸ್ಕರಿಸಿದರೆ, ಅವನು ಪಾಪಗಳನ್ನೆಲ್ಲ ನಿರ್ಮೂಲಮಾಡುತ್ತಾನೆ; ಆದುದರಿಂದ ಭಗವಂತನು ಪರಮಪವಿತ್ರನು.

ಅಥವಾ ಭಗವಂತನು ಸ್ವಯಾಥಾತ್ಮ್ಯಜ್ಞಾನದಿಂದ ಸಂಸಾರಬಂಧನಕ್ಕೆ ಕಾರಣ ವಾದ ಪುಣ್ಯಾಪುಣ್ಯರೂಪವಾದ ಕರ್ಮವನ್ನೂ, ತತ್ಕಾರಣವಾದ ಅಜ್ಞಾನವನ್ನೂ ಸಂಪೂರ್ಣವಾಗಿ ನಾಶಮಾಡುತ್ತಾನೆ; ಆದುದರಿಂದ ಅವನು ಪವಿತ್ರರಲ್ಲಿ ಪವಿತ್ರನು.

2. ಸುಖ, ಸುಖದ ಸಾಧನ ಮತ್ತು ಸುಖದ ಜ್ಞಾಪಕ (ಎಂದರೆ ಯಾವುದು ಸುಖದ ಜ್ಞಾನವನ್ನು ಕೊಡುತ್ತದೋ ಅದು)—ಇವುಗಳಿಗೆ ಮಂಗಲ ಎಂದು ಹೇಳುತ್ತಾರೆ. ಭಗವಂತನು ಇವುಗಳಿಗಿಂತಲೂ ಶ್ರೇಷ್ಠವಾದ ಮತ್ತು ಪರಮಾನಂದವು ಲಕ್ಷಣವಾಗಿ ಉಳ್ಳ ಮಂಗಲವಾಗಿರುವನಾದ್ದರಿಂದ ಅವನು ಮಂಗಲಗಳಲ್ಲಿ ಮಂಗಲನು ಎಂದು ಹೇಳಿದೆ.

3. ಭಗವಂತನು ಪ್ರಕಾಶವನ್ನು ಬೀರುವುದೇ ಮೊದಲಾದ ಗುಣಗಳಿಂದ ಅತ್ಯಂತ ಉತ್ಕೃಷ್ಟನಾಗಿರುವುದರಿಂದ ದೇವತೆಗಳಿಗೆ ದೇವರು.

**ಯತಃ ಸರ್ವಾಣಿ ಭೂತಾನಿ ಭವಂತ್ಯಾದಿಯುಗಾಗಮೇ ।**
**ಯಸ್ಮಿಂಶ್ಚ ಪ್ರಲಯಂ ಯಾಂತಿ ಪುನರೇವ ಯುಗಕ್ಷಯೇ ॥ ೧೧ ॥**

ಪೂರ್ವೋಕ್ತನಾದ ಏಕಮಾತ್ರನಾದ ದೇವನಿಂದ ಕಲ್ಪಾದಿಯಲ್ಲಿ ಸಕಲ ಭೂತಗಳೂ ಹುಟ್ಟುತ್ತವೆ ಮತ್ತು ಅವು ಪುನಃ ಮಹಾಪ್ರಲಯದಲ್ಲಿ ಅವನಲ್ಲಿಯೇ ಲಯವನ್ನು ಹೊಂದುತ್ತವೆ.

**ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ ಭೂಪತೇ ।**
**ವಿಷ್ಣೋರ್ನಾಮಸಹಸ್ರಂ ಮೇ ಶೃಣು ಪಾಪಭಯಾಪಹಮ್ ॥ ೧೨ ॥**

ಎಲೈ ಭೂಪತಿಯೇ, ಪೂರ್ವೋಕ್ತಲಕ್ಷಣಗಳುಳ್ಳ, ಲೋಕಪ್ರಧಾನನಾದ,[1] ಜಗನ್ನಾಥನಾದ[2] ವಿಷ್ಣುವಿನ, ಅಶುಭಕರ್ಮಜನಿತವಾದ ಪಾಪವನ್ನು ಮತ್ತು ಸಂಸಾರರೂಪವಾದ ಭಯವನ್ನು ಹೋಗಲಾಡಿಸುವ, ಸಹಸ್ರನಾಮಗಳನ್ನು ನನ್ನಿಂದ (ಏಕಾಗ್ರಮನಸ್ಸಿನಿಂದ) ಕೇಳು.

1. ಭಗವಂತನು ಜ್ಞಾನಕ್ಕೆ ಹೇತುಭೂತಗಳಾದ ವಿದ್ಯೆಗಳಿಂದ ಪ್ರತಿಪಾದಿಸಲ್ಪಡುತ್ತಾನೆ. ಆದುದರಿಂದ ಅವನು ಲೋಕಪ್ರಧಾನನೆಂದು ಹೇಳಿದೆ.

2. ಜಗತ್ತಿಗೆ ಸ್ವಾಮಿಯಾಗಿರುವ, ಮಾಯೆಯಿಂದ ವಿವಿಧನಾಗಿ ತೋರುವ ನಿರ್ಲೇಪನಾದ ಪರಮಾತ್ಮನು.

**ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ ।**
**ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ಭೂತಯೇ ॥ ೧೩ ॥**

ಮಹಾತ್ಮನಾದ ಭಗವಂತನ ಯಾವ ನಾಮಗಳು ಗುಣಸಂಬಂಧದಿಂದ ಪ್ರವೃತ್ತವಾದುವುಗಳೋ ಮತ್ತು ಅವುಗಳಲ್ಲಿ ಯಾವುವು ಪ್ರಸಿದ್ಧವಾದುವುಗಳೋ, ಮಂತ್ರಗಳಿಂದಲೂ ಮಂತ್ರದ್ರಷ್ಟೃಗಳಿಂದಲೂ ಯಾವುವು ಸರ್ವತ್ರವೂ ಭಗವತ್ಕಥನಗಳಲ್ಲಿ ಅಲ್ಲಲ್ಲಿ ಹಾಡಲ್ಪಡುತ್ತವೋ, ಅವುಗಳನ್ನು ಪುರುಷಾರ್ಥಚತುಷ್ಟಯವನ್ನು ಇಚ್ಛಿಸುವವರ ಪುರುಷಾರ್ಥಚತುಷ್ಟಯಸಿದ್ಧಿಗೋಸ್ಕರ ಹೇಳುವೆನು.

# ಶ್ರೀವಿಷ್ಣುಸಹಸ್ರನಾಮ

॥ ನ್ಯಾಸಃ ॥

ಅಸ್ಯ ಶ್ರೀವಿಷ್ಣೋರ್ದಿವ್ಯಸಹಸ್ರನಾಮಸ್ತೋತ್ರಮಂತ್ರಸ್ಯ ಭಗವಾನ್ ವೇದವ್ಯಾಸ ಋಷಿಃ । ಅನುಷ್ಟುಪ್ ಛಂದಃ । ಶ್ರೀವಿಷ್ಣುಃ ಪರಮಾತ್ಮಾ ದೇವತಾ । ಅಮೃತಾಂಶೂದ್ಭವೋ ಭಾನುರಿತಿ ಬೀಜಮ್ । ದೇವಕೀನಂದನಃ ಸ್ರಷ್ಟೇತಿ ಶಕ್ತಿಃ । ತ್ರಿಸಾಮಾ ಸಾಮಗಃ ಸಾಮೇತಿ ಹೃದಯಮ್ । ಶಂಖಭೃನ್ನಂದಕೀ ಚಕ್ರೀತಿ ಕೀಲಕಮ್ । ಶಾಂರ್ಗಧನ್ವಾ ಗದಾಧರ ಇತ್ಯಸ್ತ್ರಮ್ । ರಥಾಂಗಪಾಣಿರಕ್ಷೋಭ್ಯ ಇತಿ ಕವಚಮ್ । ಉದ್ಭವಃ ಕ್ಷೋಭಣೋ ದೇವ ಇತಿ ಪರಮೋ ಮಂತ್ರಃ । ಶ್ರೀಮಹಾವಿಷ್ಣುಪ್ರೀತ್ಯರ್ಥೇ ಜಪೇ ವಿನಿಯೋಗಃ ।

## ಧ್ಯಾನಮ್

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಮ್ ।

ಲಕ್ಷ್ಮೀಕಾಂತಂ ಕಮಲನಯನಂ ಯೋಗಿಭಿರ್ಧ್ಯಾನಗಮ್ಯಂ
ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಮ್ ॥

ಶಾಂತಾಕಾರನೂ, ಶೇಷಶಾಯಿಯೂ, ಪದ್ಮನಾಭನೂ, ಸುರರಿಗೆಲ್ಲ ಈಶ್ವರನೂ, ವಿಶ್ವಕ್ಕೆ ಆಧಾರನೂ, ಆಕಾಶಸದೃಶನೂ, ಮೇಘವರ್ಣವುಳ್ಳವನೂ, ಶುಭವಾದ ಅಂಗಗಳುಳ್ಳವನೂ, ಲಕ್ಷ್ಮೀಪತಿಯೂ, ತಾವರೆಯಂತೆ ಕಣ್ಣುಗಳುಳ್ಳವನೂ, ಯೋಗಿಗಳಿಂದ ಧ್ಯಾನದ ದ್ವಾರಾ ಹೊಂದಲ್ಪಡುವವನೂ ಸಂಸಾರಭಯವನ್ನು ನಾಶಮಾಡುವವನೂ, ಸಮಸ್ತಲೋಕಗಳಿಗೆ ಏಕನಾಥನೂ ಆಗಿರುವ ಶ್ರೀವಿಷ್ಣುವನ್ನು ನಮಸ್ಕರಿಸುತ್ತೇನೆ.

# ಶ್ರೀವಿಷ್ಣುಸಹಸ್ರನಾಮಸ್ತೋತ್ರಮ್

ಓಂ ವಿಶ್ವಂ ವಿಷ್ಣುರ್ವಷಟ್ಕಾರೋ ಭೂತಭವ್ಯಭವತ್ಪ್ರಭುಃ ।
ಭೂತಕೃದ್ಭೂತಭೃದ್ಭಾವೋ ಭೂತಾತ್ಮಾ ಭೂತಭಾವನಃ ॥ ೧ ॥ (೯)
ಪೂತಾತ್ಮಾ ಪರಮಾತ್ಮಾ ಚ ಮುಕ್ತಾನಾಂ ಪರಮಾ ಗತಿಃ ।
ಅವ್ಯಯಃ ಪುರುಷಃ ಸಾಕ್ಷೀ ಕ್ಷೇತ್ರಜ್ಞೋಽಕ್ಷರ ಏವ ಚ ॥ ೨ ॥ (೧೭)

ಯೋಗೋ ಯೋಗವಿದಾಂ ನೇತಾ ಪ್ರಧಾನಪುರುಷೇಶ್ವರಃ ।
ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ ॥ ೩ ॥ (೨೪)
ಸರ್ವಃ ಶರ್ವಃ ಶಿವಃ ಸ್ಥಾಣುರ್ಭೂತಾದಿರ್ನಿಧಿರವ್ಯಯಃ ।
ಸಂಭವೋ ಭಾವನೋ ಭರ್ತಾ ಪ್ರಭವಃ ಪ್ರಭುರೀಶ್ವರಃ ॥ ೪ ॥ (೩೬)
ಸ್ವಯಂಭೂಃ ಶಂಭುರಾದಿತ್ಯಃ ಪುಷ್ಕರಾಕ್ಷೋ ಮಹಾಸ್ವನಃ ।
ಅನಾದಿನಿಧನೋ ಧಾತಾ ವಿಧಾತಾ ಧಾತುರುತ್ತಮಃ ॥ ೫ ॥ (೪೫)
ಅಪ್ರಮೇಯೋ ಹೃಷೀಕೇಶಃ ಪದ್ಮನಾಭೋಽಮರಪ್ರಭುಃ ।
ವಿಶ್ವಕರ್ಮಾ ಮನುಸ್ತ್ವಷ್ಟಾ ಸ್ಥವಿಷ್ಠಃ ಸ್ಥವಿರೋ ಧ್ರುವಃ ॥ ೬ ॥ (೫೪)

ಅಗ್ರಾಹ್ಯಃ ಶಾಶ್ವತಃ ಕೃಷ್ಣೋ ಲೋಹಿತಾಕ್ಷಃ ಪ್ರತರ್ದನಃ
ಪ್ರಭೂತಸ್ತ್ರಿಕಕುಬ್ಧಾಮ ಪವಿತ್ರಂ ಮಂಗಲಂ ಪರಮ್ ॥ ೭ ॥ (೬೩)
ಈಶಾನಃ ಪ್ರಾಣದಃ ಪ್ರಾಣೋ ಜ್ಯೇಷ್ಠಃ ಶ್ರೇಷ್ಠಃ ಪ್ರಜಾಪತಿಃ ।
ಹಿರಣ್ಯಗರ್ಭೋ ಭೂಗರ್ಭೋ ಮಾಧವೋ ಮಧುಸೂದನಃ ॥ ೮ ॥ (೭೩)

ಈಶ್ವರೋ ವಿಕ್ರಮೀ ಧನ್ವೀ ಮೇಧಾವೀ ವಿಕ್ರಮಃ ಕ್ರಮಃ ।
ಅನುತ್ತಮೋ ದುರಾಧರ್ಷಃ ಕೃತಜ್ಞಃ ಕೃತಿರಾತ್ಮವಾನ್ ॥ ೯ ॥ (೮೪)
ಸುರೇಶಃ ಶರಣಂ ಶರ್ಮ ವಿಶ್ವರೇತಾಃ ಪ್ರಜಾಭವಃ ।
ಅಹಃ ಸಂವತ್ಸರೋ ವ್ಯಾಲಃ ಪ್ರತ್ಯಯಃ ಸರ್ವದರ್ಶನಃ ॥ ೧೦ ॥ (೯೪)
ಅಜಃ ಸರ್ವೇಶ್ವರಃ ಸಿದ್ಧಃ ಸಿದ್ಧಿಃ ಸರ್ವಾದಿರಚ್ಯುತಃ ।
ವೃಷಾಕಪಿರಮೇಯಾತ್ಮಾ ಸರ್ವಯೋಗವಿನಿಃಸೃತಃ ॥ ೧೧ ॥ (೧೦೩)

ವಸುರ್ವಸುಮನಾಃ ಸತ್ಯಃ ಸಮಾತ್ಮಾ ಸಮ್ಮಿತಃ ಸಮಃ ।
ಅಮೋಘಃ ಪುಂಡರೀಕಾಕ್ಷೋ ವೃಷಕರ್ಮಾ ವೃಷಾಕೃತಿಃ
॥ ೧೨ ॥ (೧೧೩)

ರುದ್ರೋ ಬಹುಶಿರಾ ಬಭ್ರುಃ ವಿಶ್ವಯೋನಿಃ ಶುಚಿಶ್ರವಾಃ ।
ಅಮೃತಃ ಶಾಶ್ವತಸ್ಥಾಣುಃ ವರಾರೋಹೋ ಮಹಾತಪಾಃ
॥ ೧೩ ॥ (೧೨೨)

ಸರ್ವಗಃ ಸರ್ವವಿದ್ಭಾನುರ್ವಿಷ್ವಕ್ಸೇನೋ ಜನಾರ್ದನಃ ।
ವೇದೋ ವೇದವಿದವ್ಯಂಗೋ ವೇದಾಂಗೋ ವೇದವಿತ್ ಕವಿಃ
॥ ೧೪ ॥ (೧೩೨)

ಲೋಕಾಧ್ಯಕ್ಷಃ ಸುರಾಧ್ಯಕ್ಷೋ ಧರ್ಮಾಧ್ಯಕ್ಷಃ ಕೃತಾಕೃತಃ ।
ಚತುರಾತ್ಮಾ ಚತುರ್ವ್ಯೂಹಶ್ಚತುರ್ದಂಷ್ಟ್ರಶ್ಚತುರ್ಭುಜಃ
॥ ೧೫ ॥ (೧೪೦)

ಭ್ರಾಜಿಷ್ಣುರ್ಭೋಜನಂ ಭೋಕ್ತಾ ಸಹಿಷ್ಣುರ್ಜಗದಾದಿಜಃ ।
ಅನಘೋ ವಿಜಯೋ ಜೇತಾ ವಿಶ್ವಯೋನಿಃ ಪುನರ್ವಸುಃ
॥ ೧೬ ॥ (೧೫೦)

ಉಪೇಂದ್ರೋ ವಾಮನಃ ಪ್ರಾಂಶುರಮೋಘಃ ಶುಚಿರೂರ್ಜಿತಃ ।
ಅತೀಂದ್ರಃ ಸಂಗ್ರಹಃ ಸರ್ಗೋ ಧೃತಾತ್ಮಾ ನಿಯಮೋ ಯಮಃ
॥ ೧೭ ॥ (೧೬೨)

ವೇದ್ಯೋ ವೈದ್ಯಃ ಸದಾಯೋಗೀ ವೀರಹಾ ಮಾಧವೋ ಮಧುಃ ।
ಅತೀಂದ್ರಿಯೋ ಮಹಾಮಾಯೋ ಮಹೋತ್ಸಾಹೋ ಮಹಾಬಲಃ
॥ ೧೮ ॥ (೧೭೨)

ಮಹಾಬುದ್ಧಿರ್ಮಹಾವೀರ್ಯೋ ಮಹಾಶಕ್ತಿರ್ಮಹಾದ್ಯುತಿಃ ।
ಅನಿರ್ದೇಶ್ಯವಪುಃ ಶ್ರೀಮಾನಮೇಯಾತ್ಮಾ ಮಹಾದ್ರಿಧೃಕ್
॥ ೧೯ ॥ (೧೮೦)

ಮಹೇಷ್ವಾಸೋ ಮಹೀಭರ್ತಾ ಶ್ರೀನಿವಾಸಃ ಸತಾಂ ಗತಿಃ ।
ಅನಿರುದ್ಧಃ ಸುರಾನಂದೋ ಗೋವಿಂದೋ ಗೋವಿದಾಂ ಪತಿಃ
॥ ೨೦ ॥ (೧೮೮)

ಮರೀಚಿರ್ದಮನೋ ಹಂಸಃ ಸುಪರ್ಣೋ ಭುಜಗೋತ್ತಮಃ ।
ಹಿರಣ್ಯನಾಭಃ ಸುತಪಾಃ ಪದ್ಮನಾಭಃ ಪ್ರಜಾಪತಿಃ ॥ ೨೧ ॥ (೧೯೭)
ಅಮೃತ್ಯುಃ ಸರ್ವದೃಕ್ ಸಿಂಹಃ ಸಂಧಾತಾ ಸಂಧಿಮಾನ್ ಸ್ಥಿರಃ ।
ಅಜೋ ದುರ್ಮರ್ಷಣಃ ಶಾಸ್ತಾ ವಿಶ್ರುತಾತ್ಮಾ ಸುರಾರಿಹಾ
॥ ೨೨ ॥ (೨೦೮)

ಗುರುರ್ಗುರುತಮೋ ಧಾಮ ಸತ್ಯಃ ಸತ್ಯಪರಾಕ್ರಮಃ ।
ನಿಮಿಷೋಽನಿಮಿಷಃ ಸ್ರಗ್ವೀ ವಾಚಸ್ಪತಿರುದಾರಧೀಃ
॥ ೨೩ ॥ (೨೧೭)

ಅಗ್ರಣೀರ್ಗ್ರಾಮಣೀಃ ಶ್ರೀಮಾನ್ ನ್ಯಾಯೋ ನೇತಾ ಸಮೀರಣಃ ।
ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್
॥ ೨೪ ॥ (೨೨೭)

ಆವರ್ತನೋ ನಿವೃತ್ತಾತ್ಮಾ ಸಂವೃತಃ ಸಂಪ್ರಮರ್ದನಃ ।
ಅಹಸ್ಸಂವರ್ತಕೋ ವಹ್ನಿರನಿಲೋ ಧರಣೀಧರಃ ॥ ೨೫ ॥ (೨೩೫)
ಸುಪ್ರಸಾದಃ ಪ್ರಸನ್ನಾತ್ಮಾ ವಿಶ್ವಧೃಗ್ ವಿಶ್ವಭುಗ್ ವಿಭುಃ ।
ಸತ್ಕರ್ತಾ ಸತ್ಕೃತಃ ಸಾಧುರ್ಜಹ್ನುರ್ನಾರಾಯಣೋ ನರಃ
॥ ೨೬ ॥ (೨೪೬)

ಅಸಂಖ್ಯೇಯೋಽಪ್ರಮೇಯಾತ್ಮಾ ವಿಶಿಷ್ಟಃ ಶಿಷ್ಟಕೃಚ್ಛುಚಿಃ ।
ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ ॥ ೨೭ ॥ (೨೫೫)
ವೃಷಾಹೀ ವೃಷಭೋ ವಿಷ್ಣುರ್ವೃಷಪರ್ವಾ ವೃಷೋದರಃ ।
ವರ್ಧನೋ ವರ್ಧಮಾನಶ್ಚ ವಿವಿಕ್ತಃ ಶ್ರುತಿಸಾಗರಃ ॥ ೨೮ ॥ (೨೬೪)
ಸುಭುಜೋ ದುರ್ಧರೋ ವಾಗ್ಮೀ ಮಹೇಂದ್ರೋ ವಸುದೋ ವಸುಃ।
ನೈಕರೂಪೋ ಬೃಹದ್ರೂಪಃ ಶಿಪಿವಿಷ್ಟಃ ಪ್ರಕಾಶನಃ ॥ ೨೯ ॥ (೨೭೪)
ಓಜಸ್ತೇಜೋದ್ಯುತಿಧರಃ ಪ್ರಕಾಶಾತ್ಮಾ ಪ್ರತಾಪನಃ ।
ಋದ್ಧಃ ಸ್ಪಷ್ಟಾಕ್ಷರೋ ಮಂತ್ರಶ್ಚಂದ್ರಾಂಶುರ್ಭಾಸ್ಕರದ್ಯುತಿಃ
॥ ೩೦ ॥ (೨೮೨)

ಅಮೃತಾಂಶೂದ್ಭವೋ ಭಾನುಃ ಶಶಬಿಂದುಃ ಸುರೇಶ್ವರಃ ।
ಔಷಧಂ ಜಗತಃ ಸೇತುಃ ಸತ್ಯಧರ್ಮಪರಾಕ್ರಮಃ ॥ ೩೧ ॥ (೨೮೯)

ಭೂತಭವ್ಯಭವನ್ನಾಥಃ ಪವನಃ ಪಾವನೋಽನಲಃ ।
ಕಾಮಹಾ ಕಾಮಕೃತ್ ಕಾಂತಃ ಕಾಮಃ ಕಾಮಪ್ರದಃ ಪ್ರಭುಃ
॥ ೩೨ ॥ (೨೯೯)

ಯುಗಾದಿಕೃದ್ ಯುಗಾವರ್ತೋ ನೈಕಮಾಯೋ ಮಹಾಶನಃ ।
ಅದೃಶ್ಯೋ ವ್ಯಕ್ತರೂಪಶ್ಚ ಸಹಸ್ರಜಿದನಂತಜಿತ್ ॥ ೩೩ ॥ (೩೦೭)
ಇಷ್ಟೋಽವಿಶಿಷ್ಟಃ ಶಿಷ್ಟೇಷ್ಟಃ ಶಿಖಂಡೀ ನಹುಷೋ ವೃಷಃ ।
ಕ್ರೋಧಹಾ ಕ್ರೋಧಕೃತ್ ಕರ್ತಾ ವಿಶ್ವಬಾಹುರ್ಮಹೀಧರಃ
॥ ೩೪ ॥ (೩೧೮)

ಅಚ್ಯುತಃ ಪ್ರಥಿತಃ ಪ್ರಾಣಃ ಪ್ರಾಣದೋ ವಾಸವಾನುಜಃ ।
ಅಪಾಂ ನಿಧಿರಧಿಷ್ಠಾನಮಪ್ರಮತ್ತಃ ಪ್ರತಿಷ್ಠಿತಃ ॥ ೩೫ ॥ (೩೨೭)

ಸ್ಕಂದಃ ಸ್ಕಂದಧರೋ ಧುರ್ಯೋ ವರದೋ ವಾಯುವಾಹನಃ ।
ವಾಸುದೇವೋ ಬೃಹದ್ಭಾನುರಾದಿದೇವಃ ಪುರಂದರಃ ॥ ೩೬ ॥ (೩೩೬)
ಅಶೋಕಸ್ತಾರಣಸ್ತಾರಃ ಶೂರಃ ಶೌರಿರ್ಜನೇಶ್ವರಃ ।
ಅನುಕೂಲಃ ಶತಾವರ್ತಃ ಪದ್ಮೀ ಪದ್ಮನಿಭೇಕ್ಷಣಃ ॥ ೩೭ ॥ (೩೪೬)

ಪದ್ಮನಾಭೋಽರವಿಂದಾಕ್ಷಃ ಪದ್ಮಗರ್ಭಃ ಶರೀರಭೃತ್ ।
ಮಹರ್ದ್ಧಿರ್ಋದ್ಧೋ ವೃದ್ಧಾತ್ಮಾ ಮಹಾಕ್ಷೋ ಗರುಡಧ್ವಜಃ
॥ ೩೮ ॥ (೩೫೪)

ಅತುಲಃ ಶರಭೋ ಭೀಮಃ ಸಮಯಜ್ಞೋ ಹವಿರ್ಹರಿಃ ।
ಸರ್ವಲಕ್ಷಣಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಂಜಯಃ
॥ ೩೯ ॥ (೩೬೨)

ವಿಕ್ಷರೋ ರೋಹಿತೋ ಮಾರ್ಗೋ ಹೇತುರ್ದಾಮೋದರಃ ಸಹಃ ।
ಮಹೀಧರೋ ಮಹಾಭಾಗೋ ವೇಗವಾನಮಿತಾಶನಃ
॥ ೪೦ ॥ (೩೭೨)

ಉದ್ಭವಃ ಕ್ಷೋಭಣೋ ದೇವಃ ಶ್ರೀಗರ್ಭಃ ಪರಮೇಶ್ವರಃ ।
ಕರಣಂ ಕಾರಣಂ ಕರ್ತಾ ವಿಕರ್ತಾ ಗಹನೋ ಗುಹಃ ॥ ೪೧ ॥ (೩೮೨)
ವ್ಯವಸಾಯೋ ವ್ಯವಸ್ಥಾನಃ ಸಂಸ್ಥಾನಃ ಸ್ಥಾನದೋ ಧ್ರುವಃ ।
ಪರರ್ದ್ಧಿಃ ಪರಮಸ್ಪಷ್ಟಸ್ತುಷ್ಟಃ ಪುಷ್ಟಃ ಶುಭೇಕ್ಷಣಃ ॥ ೪೨ ॥ (೩೯೨)

ರಾಮೋ ವಿರಾಮೋ ವಿರತೋ ಮಾರ್ಗೋ ನೇಯೋ
ನಯೋಽನಯಃ ।
ವೀರಃ ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ
॥ ೪೩ ॥ (೪೦೪)

ವೈಕುಂಠಃ ಪುರುಷಃ ಪ್ರಾಣಃ ಪ್ರಾಣದಃ ಪ್ರಣವಃ ಪೃಥುಃ ।
ಹಿರಣ್ಯಗರ್ಭಃ ಶತ್ರುಘ್ನೋ ವ್ಯಾಪ್ತೋ ವಾಯುರಧೋಕ್ಷಜಃ
॥ ೪೪ ॥ (೪೧೫)

ಋತುಃ ಸುದರ್ಶನಃ ಕಾಲಃ ಪರಮೇಷ್ಠೀ ಪರಿಗ್ರಹಃ ।
ಉಗ್ರಃ ಸಂವತ್ಸರೋ ದಕ್ಷೋ ವಿಶ್ರಾಮೋ ವಿಶ್ವದಕ್ಷಿಣಃ
॥ ೪೫ ॥ (೪೨೫)

ವಿಸ್ತಾರಃ ಸ್ಥಾವರಸ್ಥಾಣುಃ ಪ್ರಮಾಣಂ ಬೀಜಮವ್ಯಯಮ್ ।
ಅರ್ಥೋಽನರ್ಥೋ ಮಹಾಕೋಶೋ ಮಹಾಭೋಗೋ
ಮಹಾಧನಃ ॥ ೪೬ ॥ (೪೩೪)

ಅನಿರ್ವಿಣ್ಣಃ ಸ್ಥವಿಷ್ಠೋಽಭೂರ್ಧರ್ಮಯೂಪೋ ಮಹಾಮಖಃ ।
ನಕ್ಷತ್ರನೇಮಿರ್ನಕ್ಷತ್ರೀ ಕ್ಷಮಃ ಕ್ಷಾಮಃ ಸಮೀಹನಃ ॥ ೪೭ ॥ (೪೪೪)

ಯಜ್ಞ ಇಜ್ಯೋ ಮಹೇಜ್ಯಶ್ಚ ಕ್ರತುಃ ಸತ್ರಂ ಸತಾಂ ಗತಿಃ ।
ಸರ್ವದರ್ಶೀ ವಿಮುಕ್ತಾತ್ಮಾ ಸರ್ವಜ್ಞೋ ಜ್ಞಾನಮುತ್ತಮಮ್
॥ ೪೮ ॥ (೪೫೪)

ಸುವ್ರತಃ ಸುಮುಖಃ ಸೂಕ್ಷ್ಮಃ ಸುಘೋಷಃ ಸುಖದಃ ಸುಹೃತ್ ।
ಮನೋಹರೋ ಜಿತಕ್ರೋಧೋ ವೀರಬಾಹುರ್ವಿದಾರಣಃ
॥ ೪೯ ॥ (೪೬೪)

ಸ್ವಾಪನಃ ಸ್ವವಶೋ ವ್ಯಾಪೀ ನೈಕಾತ್ಮಾ ನೈಕಕರ್ಮಕೃತ್ ।
ವತ್ಸರೋ ವತ್ಸಲೋ ವತ್ಸೀ ರತ್ನಗರ್ಭೋ ಧನೇಶ್ವರಃ ॥೫೦॥ (೪೭೪)

ಧರ್ಮಗುಬ್ಧರ್ಮಕೃದ್ಧರ್ಮೀ ಸದಸತ್ ಕ್ಷರಮಕ್ಷರಮ್ ।
ಅವಿಜ್ಞಾತಾ ಸಹಸ್ರಾಂಶುರ್ವಿಧಾತಾ ಕೃತಲಕ್ಷಣಃ ॥ ೫೧ ॥ (೪೮೫)

ಗಭಸ್ತಿನೇಮಿಃ ಸತ್ತ್ವಸ್ಥಃ ಸಿಂಹೋ ಭೂತಮಹೇಶ್ವರಃ ।
ಆದಿದೇವೋ ಮಹಾದೇವೋ ದೇವೇಶೋ ದೇವಭೃದ್ ಗುರುಃ
॥ ೫೨ ॥ (೪೯೩)

ಉತ್ತರೋ ಗೋಪತಿರ್ಗೋಪ್ತಾ ಜ್ಞಾನಗಮ್ಯಃ ಪುರಾತನಃ |
ಶರೀರಭೂತಭೃದ್ಭೋಕ್ತಾ ಕಪೀಂದ್ರೋ ಭೂರಿದಕ್ಷಿಣಃ
|| ೫೩ || (೫೦೨)

ಸೋಮಪೋಽಮೃತಪಃ ಸೋಮಃ ಪುರುಜಿತ್ ಪುರುಸತ್ತಮಃ |
ವಿನಯೋ ಜಯಃ ಸತ್ಯಸಂಧೋ ದಾಶಾರ್ಹಃ ಸಾತ್ವತಾಂ ಪತಿಃ
|| ೫೪ || (೫೧೨)

ಜೀವೋ ವಿನಯಿತಾಸಾಕ್ಷೀ ಮುಕುಂದೋಽಮಿತವಿಕ್ರಮಃ |
ಅಂಭೋನಿಧಿರನಂತಾತ್ಮಾ ಮಹೋದಧಿಶಯೋಽಂತಕಃ
|| ೫೫ || (೫೨೦)

ಅಜೋ ಮಹಾರ್ಹಃ ಸ್ವಾಭಾವ್ಯೋ ಜಿತಾಮಿತ್ರಃ ಪ್ರಮೋದನಃ |
ಆನಂದೋ ನಂದನೋ ನಂದಃ ಸತ್ಯಧರ್ಮಾ ತ್ರಿವಿಕ್ರಮಃ
|| ೫೬ || (೫೩೦)

ಮಹರ್ಷಿಃ ಕಪಿಲಾಚಾರ್ಯಃ ಕೃತಜ್ಞೋ ಮೇದಿನೀಪತಿಃ |
ತ್ರಿಪದಸ್ತ್ರಿದಶಾಧ್ಯಕ್ಷೋ ಮಹಾಶೃಂಗಃ ಕೃತಾಂತಕೃತ್ ||೫೭|| (೫೩೭)
ಮಹಾವರಾಹೋ ಗೋವಿಂದಃ ಸುಷೇಣಃ ಕನಕಾಂಗದೀ |
ಗುಹ್ಯೋ ಗಭೀರೋ ಗಹನೋ ಗುಪ್ತಶ್ಚಕ್ರಗದಾಧರಃ
|| ೫೮ || (೫೪೬)

ವೇಧಾಃ ಸ್ವಾಂಗೋಽಜಿತಃ ಕೃಷ್ಣೋ ದೃಢಃ ಸಂಕರ್ಷಣೋಽಚ್ಯುತಃ |
ವರುಣೋ ವಾರುಣೋ ವೃಕ್ಷಃ ಪುಷ್ಕರಾಕ್ಷೋ ಮಹಾಮನಾಃ
|| ೫೯ || (೫೫೭)

ಭಗವಾನ್ ಭಗಹಾನಂದೀ ವನಮಾಲೀ ಹಲಾಯುಧಃ |
ಆದಿತ್ಯೋ ಜ್ಯೋತಿರಾದಿತ್ಯಃ ಸಹಿಷ್ಣುರ್ಗತಿಸತ್ತಮಃ ||೬೦|| (೫೬೬)
ಸುಧನ್ವಾ ಖಂಡಪರಶುರ್ದಾರುಣೋ ದ್ರವಿಣಪ್ರದಃ |
ದಿವಃಸ್ಪೃಕ್ ಸರ್ವದೃಗ್ವ್ಯಾಸೋ ವಾಚಸ್ಪತಿರಯೋನಿಜಃ
|| ೬೧ || (೫೭೩)

ತ್ರಿಸಾಮಾ ಸಾಮಗಃ ಸಾಮ ನಿರ್ವಾಣಂ ಭೇಷಜಂ ಭಿಷಕ್ |
ಸಂನ್ಯಾಸಕೃಚ್ಛಮಃ ಶಾಂತೋ ನಿಷ್ಠಾ ಶಾಂತಿಃ ಪರಾಯಣಮ್
|| ೬೨ || (೫೮೫)

ಶುಭಾಂಗಃ ಶಾಂತಿದಃ ಸ್ರಷ್ಟಾ ಕುಮುದಃ ಕುವಲೇಶಯಃ ।
ಗೋಹಿತೋ ಗೋಪತಿರ್ಗೋಪ್ತಾ ವೃಷಭಾಕ್ಷೋ ವೃಷಪ್ರಿಯಃ
॥ ೬೩ ॥ (೫೯೫)

ಅನಿವರ್ತೀ ನಿವೃತ್ತಾತ್ಮಾ ಸಂಕ್ಷೇಪ್ತಾ ಕ್ಷೇಮಕೃಚ್ಛಿವಃ ।
ಶ್ರೀವತ್ಸವಕ್ಷಾಃ ಶ್ರೀವಾಸಃ ಶ್ರೀಪತಿಃ ಶ್ರೀಮತಾಂ ವರಃ
॥ ೬೪ ॥ (೬೦೪)

ಶ್ರೀದಃ ಶ್ರೀಶಃ ಶ್ರೀನಿವಾಸಃ ಶ್ರೀನಿಧಿಃ ಶ್ರೀವಿಭಾವನಃ ।
ಶ್ರೀಧರಃ ಶ್ರೀಕರಃ ಶ್ರೇಯಃ ಶ್ರೀಮಾನ್ ಲೋಕತ್ರಯಾಶ್ರಯಃ
॥ ೬೫ ॥ (೬೧೪)

ಸ್ವಕ್ಷಃ ಸ್ವಂಗಃ ಶತಾನಂದೋ ನಂದಿರ್ಜ್ಯೋತಿರ್ಗಣೇಶ್ವರಃ ।
ವಿಜಿತಾತ್ಮಾ ವಿಧೇಯಾತ್ಮಾ ಸತ್ಕೀರ್ತಿಶ್ಛಿನ್ನಸಂಶಯಃ ॥ ೬೬ ॥ (೬೨೩)
ಉದೀರ್ಣಃ ಸರ್ವತಶ್ಚಕ್ಷುರನೀಶಃ ಶಾಶ್ವತಸ್ಥಿರಃ ।
ಭೂಶಯೋ ಭೂಷಣೋ ಭೂತಿರ್ವಿಶೋಕಃ ಶೋಕನಾಶನಃ
॥ ೬೭ ॥ (೬೩೨)

ಅರ್ಚಿಷ್ಮಾನರ್ಚಿತಃ ಕುಂಭೋ ವಿಶುದ್ಧಾತ್ಮಾ ವಿಶೋಧನಃ ।
ಅನಿರುದ್ಧೋಽಪ್ರತಿರಥಃ ಪ್ರದ್ಯುಮ್ನೋಽಮಿತವಿಕ್ರಮಃ
॥ ೬೮ ॥ (೬೪೧)

ಕಾಲನೇಮಿನಿಹಾ ವೀರಃ ಶೌರಿಃ ಶೂರಜನೇಶ್ವರಃ ।
ತ್ರಿಲೋಕಾತ್ಮಾ ತ್ರಿಲೋಕೇಶಃ ಕೇಶವಃ ಕೇಶಿಹಾ ಹರಿಃ
॥ ೬೯ ॥ (೬೫೦)

ಕಾಮದೇವಃ ಕಾಮಪಾಲಃ ಕಾಮೀ ಕಾಂತಃ ಕೃತಾಗಮಃ ।
ಅನಿರ್ದೇಶ್ಯವಪುರ್ವಿಷ್ಣುರ್ವೀರೋಽನಂತೋ ಧನಂಜಯಃ
॥ ೭೦ ॥ (೬೬೦)

ಬ್ರಹ್ಮಣ್ಯೋ ಬ್ರಹ್ಮಕೃದ್ ಬ್ರಹ್ಮಾ ಬ್ರಹ್ಮ ಬ್ರಹ್ಮವಿವರ್ಧನಃ ।
ಬ್ರಹ್ಮವಿದ್ ಬ್ರಾಹ್ಮಣೋ ಬ್ರಹ್ಮೀ ಬ್ರಹ್ಮಜ್ಞೋ ಬ್ರಾಹ್ಮಣಪ್ರಿಯಃ
॥ ೭೧ ॥ (೬೭೦)

ಮಹಾಕ್ರಮೋ ಮಹಾಕರ್ಮಾ ಮಹಾತೇಜಾ ಮಹೋರಗಃ ।
ಮಹಾಕ್ರತುರ್ಮಹಾಯಜ್ವಾ ಮಹಾಯಜ್ಞೋ ಮಹಾಹವಿಃ
॥ ೭೨ ॥ (೬೭೮)

ಸ್ತವ್ಯಃ ಸ್ತವಪ್ರಿಯಃ ಸ್ತೋತ್ರಂ ಸ್ತುತಿಃ ಸ್ತೋತಾ ರಣಪ್ರಿಯಃ ।
ಪೂರ್ಣಃ ಪೂರಯಿತಾ ಪುಣ್ಯಃ ಪುಣ್ಯಕೀರ್ತಿರನಾಮಯಃ
|| ೭೩ || (೬೮೯)

ಮನೋಜವಸ್ತೀರ್ಥಕರೋ ವಸುರೇತಾ ವಸುಪ್ರದಃ ।
ವಸುಪ್ರದೋ ವಾಸುದೇವೋ ವಸುರ್ವಸುಮನಾ ಹವಿಃ
|| ೭೪ || (೬೯೮)

ಸದ್ಗತಿಃ ಸತ್ಕೃತಿಃ ಸತ್ತಾ ಸದ್ಭೂತಿಃ ಸತ್ಪರಾಯಣಃ ।
ಶೂರಸೇನೋ ಯದುಶ್ರೇಷ್ಠಃ ಸನ್ನಿವಾಸಃ ಸುಯಾಮುನಃ
|| ೭೫ || (೭೦೭)

ಭೂತಾವಾಸೋ ವಾಸುದೇವಃ ಸರ್ವಾಸುನಿಲಯೋಽನಲಃ ।
ದರ್ಪಹಾ ದರ್ಪದೋ ದೃಪ್ತೋ ದುರ್ಧರೋಽಥಾಪರಾಜಿತಃ
|| ೭೬ || (೭೧೬)

ವಿಶ್ವಮೂರ್ತಿರ್ಮಹಾಮೂರ್ತಿರ್ದೀಪ್ತಮೂರ್ತಿರಮೂರ್ತಿಮಾನ್
ಅನೇಕಮೂರ್ತಿರವ್ಯಕ್ತಃ ಶತಮೂರ್ತಿಃ ಶತಾನನಃ || ೭೭ || (೭೨೪)
ಏಕೋ ನೈಕಃ ಸವಃ ಕಃ ಕಿಂ ಯತ್ತತ್ಪದಮನುತ್ತಮಮ್ ।
ಲೋಕಬಂಧುರ್ಲೋಕನಾಥೋ ಮಾಧವೋ ಭಕ್ತವತ್ಸಲಃ
|| ೭೮ || (೭೩೬)

ಸುವರ್ಣವರ್ಣೋ ಹೇಮಾಂಗೋ ವರಾಂಗಶ್ಚಂದನಾಂಗದೀ ।
ವೀರಹಾ ವಿಷಮಃ ಶೂನ್ಯೋ ಘೃತಾಶೀರಚಲಶ್ಚಲಃ || ೭೯ || (೭೪೬)
ಅಮಾನೀ ಮಾನದೋ ಮಾನ್ಯೋ ಲೋಕಸ್ವಾಮೀ ತ್ರಿಲೋಕಧೃಕ್ ।
ಸುಮೇಧಾ ಮೇಧಜೋ ಧನ್ಯಃ ಸತ್ಯಮೇಧಾ ಧರಾಧರಃ
|| ೮೦ || (೭೫೬)

ತೇಜೋ ವೃಷೋ ದ್ಯುತಿಧರಃ ಸರ್ವಶಸ್ತ್ರಭೃತಾಂ ವರಃ ।
ಪ್ರಗ್ರಹೋ ನಿಗ್ರಹೋ ವ್ಯಗ್ರೋ ನೈಕಶೃಂಗೋ ಗದಾಗ್ರಜಃ
|| ೮೧ || (೭೬೪)

ಚತುರ್ಮೂರ್ತಿಶ್ಚತುರ್ಬಾಹುಶ್ಚತುರ್ವ್ಯೂಹಶ್ಚತುರ್ಗತಿಃ ।
ಚತುರಾತ್ಮಾ ಚತುರ್ಭಾವಶ್ಚತುರ್ವೇದವಿದೇಕಪಾತ್ || ೮೨ || (೭೭೩)

ಸಮಾವರ್ತೋಽನಿವೃತ್ತಾತ್ಮಾ ದುರ್ಜಯೋ ದುರತಿಕ್ರಮಃ ।
ದುರ್ಲಭೋ ದುರ್ಗಮೋ ದುರ್ಗೋ ದುರಾವಾಸೋ ದುರಾರಿಹಾ
॥ ೮೩ ॥ (೭೮೧)

ಶುಭಾಂಗೋ ಲೋಕಸಾರಂಗಃ ಸುತಂತುಸ್ತಂತುವರ್ಧನಃ ।
ಇಂದ್ರಕರ್ಮಾ ಮಹಾಕರ್ಮಾ ಕೃತಕರ್ಮಾ ಕೃತಾಗಮಃ
॥ ೮೪ ॥ (೭೮೯)

ಉದ್ಭವಃ ಸುಂದರಃ ಸುಂದೋ ರತ್ನನಾಭಃ ಸುಲೋಚನಃ ।
ಅರ್ಕೋ ವಾಜಸನಃ ಶೃಂಗೀ ಜಯಂತಃ ಸರ್ವವಿಜ್ಜಯೀ
॥ ೮೫ ॥ (೭೯೯)

ಸುವರ್ಣಬಿಂದುರಕ್ಷೋಭ್ಯಃ ಸರ್ವವಾಗೀಶ್ವರೇಶ್ವರಃ ।
ಮಹಾಹ್ರದೋ ಮಹಾಗರ್ತೋ ಮಹಾಭೂತೋ ಮಹಾನಿಧಿಃ
॥ ೮೬ ॥ (೮೦೬)

ಕುಮುದಃ ಕುಂದರಃ ಕುಂದಃ ಪರ್ಜನ್ಯಃ ಪಾವನೋಽನಿಲಃ ।
ಅಮೃತಾಶೋಽಮೃತವಪುಃ ಸರ್ವಜ್ಞಃ ಸರ್ವತೋಮುಖಃ
॥ ೮೭ ॥ (೮೧೬)

ಸುಲಭಃ ಸುವ್ರತಃ ಸಿದ್ಧಃ ಶತ್ರುಜಿಚ್ಛತ್ರುತಾಪನಃ ।
ನ್ಯಗ್ರೋಧೋದುಂಬರೋಽಶ್ವತ್ಥಶ್ಚಾಣೂರಾಂಧ್ರನಿಷೂದನಃ
॥ ೮೮ ॥ (೮೨೫)

ಸಹಸ್ರಾರ್ಚಿಃ ಸಪ್ತಜಿಹ್ವಃ ಸಪ್ತೈಧಾಃ ಸಪ್ತವಾಹನಃ ।
ಅಮೂರ್ತಿರನಘೋಽಚಿಂತ್ಯೋ ಭಯಕೃದ್ ಭಯನಾಶನಃ
॥ ೮೯ ॥ (೮೩೪)

ಅಣುರ್ಬೃಹತ್ಕೃಶಃ ಸ್ಥೂಲೋ ಗುಣಭೃನ್ನಿರ್ಗುಣೋ ಮಹಾನ್ ।
ಅಧೃತಃ ಸ್ವಧೃತಃ ಸ್ವಾಸ್ಯಃ ಪ್ರಾಗ್ವಂಶೋ ವಂಶವರ್ಧನಃ
॥ ೯೦ ॥ (೮೪೬)

ಭಾರಭೃತ್ ಕಥಿತೋ ಯೋಗೀ ಯೋಗೀಶಃ ಸರ್ವಕಾಮದಃ ।
ಆಶ್ರಮಃ ಶ್ರಮಣಃ ಕ್ಷಾಮಃ ಸುಪರ್ಣೋ ವಾಯುವಾಹನಃ
॥ ೯೧ ॥ (೮೫೬)

ಧನುರ್ಧರೋ ಧನುರ್ವೇದೋ ದಂಡೋ ದಮಯಿತಾ ದಮಃ ।
ಅಪರಾಜಿತಃ ಸರ್ವಸಹೋ ನಿಯಂತಾಽನಿಯಮೋಽಯಮಃ
॥ ೯೨ ॥ (೮೬೬)

ಸತ್ತ್ವವಾನ್ ಸಾತ್ತ್ವಿಕಃ ಸತ್ಯಃ ಸತ್ಯಧರ್ಮಪರಾಯಣಃ ।
ಅಭಿಪ್ರಾಯಃ ಪ್ರಿಯಾರ್ಹೋಽರ್ಹಃ ಪ್ರಿಯಕೃತ್ ಪ್ರೀತಿವರ್ಧನಃ
|| ೯೩ || (೮೭೫)

ವಿಹಾಯಸಗತಿರ್ಜ್ಯೋತಿಃ ಸುರುಚಿರ್ಹುತಭುಗ್ ವಿಭುಃ ।
ರವಿರ್ವಿರೋಚನಃ ಸೂರ್ಯಃ ಸವಿತಾ ರವಿಲೋಚನಃ
|| ೯೪ || (೮೮೫)

ಅನಂತೋ ಹುತಭುಗ್ ಭೋಕ್ತಾ ಸುಖದೋ ನೈಕಜೋಽಗ್ರಜಃ ।
ಅನಿರ್ವಿಣ್ಣಃ ಸದಾಮರ್ಷೀ ಲೋಕಾಧಿಷ್ಠಾನಮದ್ಭುತಃ
|| ೯೫ || (೮೯೫)

ಸನಾತ್ ಸನಾತನತಮಃ ಕಪಿಲಃ ಕಪಿರಪ್ಯಯಃ ।
ಸ್ವಸ್ತಿದಃ ಸ್ವಸ್ತಿಕೃತ್ ಸ್ವಸ್ತಿಃ ಸ್ವಸ್ತಿಭುಕ್ ಸ್ವಸ್ತಿದಕ್ಷಿಣಃ
|| ೯೬ || (೯೦೫)

ಅರೌದ್ರಃ ಕುಂಡಲೀ ಚಕ್ರೀ ವಿಕ್ರಮ್ಯೂರ್ಜಿತಶಾಸನಃ ।
ಶಬ್ದಾತಿಗಃ ಶಬ್ದಸಹಃ ಶಿಶಿರಃ ಶರ್ವರೀಕರಃ || ೯೭ || (೯೧೪)

ಅಕ್ರೂರಃ ಪೇಶಲೋ ದಕ್ಷೋ ದಕ್ಷಿಣಃ ಕ್ಷಮಿಣಾಂ ವರಃ ।
ವಿದ್ವತ್ತಮೋ ವೀತಭಯಃ ಪುಣ್ಯಶ್ರವಣಕೀರ್ತನಃ
|| ೯೮ || (೯೨೨)

ಉತ್ತಾರಣೋ ದುಷ್ಕೃತಿಹಾ ಪುಣ್ಯೋ ದುಃಸ್ವಪ್ನನಾಶನಃ ।
ವೀರಹಾ ರಕ್ಷಣಃ ಸಂತೋ ಜೀವನಃ ಪರ್ಯವಸ್ಥಿತಃ
|| ೯೯ || (೯೩೧)

ಅನಂತರೂಪೋಽನಂತಶ್ರೀರ್ಜಿತಮನ್ಯುರ್ಭಯಾಪಹಃ ।
ಚತುರಶ್ರೋ ಗಭೀರಾತ್ಮಾ ವಿದಿಶೋ ವ್ಯಾದಿಶೋ ದಿಶಃ
|| ೧೦೦ || (೯೪೦)

ಅನಾದಿರ್ಭೂರ್ಭುವೋ ಲಕ್ಷ್ಮೀಃ ಸುವೀರೋ ರುಚಿರಾಂಗದಃ ।
ಜನನೋ ಜನಜನ್ಮಾದಿರ್ಭೀಮೋ ಭೀಮಪರಾಕ್ರಮಃ
|| ೧೦೧ || (೯೪೯)

ಆಧಾರನಿಲಯೋಽಧಾತಾ ಪುಷ್ಪಹಾಸಃ ಪ್ರಜಾಗರಃ ।
ಊರ್ಧ್ವಗಃ ಸತ್ಪಥಾಚಾರಃ ಪ್ರಾಣದಃ ಪ್ರಣವಃ ಪಣಃ
|| ೧೦೨ || (೯೫೮)

ಪ್ರಮಾಣಂ ಪ್ರಾಣನಿಲಯಃ ಪ್ರಾಣಭೃತ್ ಪ್ರಾಣಜೀವನಃ ।
ತತ್ತ್ವಂ ತತ್ತ್ವವಿದೇಕಾತ್ಮಾ ಜನ್ಮಮೃತ್ಯುಜರಾತಿಗಃ
॥ ೧೦೩ ॥ (೯೬೬)

ಭೂರ್ಭುವಃ ಸ್ವಸ್ತರುಸ್ತಾರಃ ಸವಿತಾ ಪ್ರಪಿತಾಮಹಃ ।
ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಂಗೋ ಯಜ್ಞವಾಹನಃ
॥ ೧೦೪ ॥ (೯೭೫)

ಯಜ್ಞಭೃದ್ ಯಜ್ಞಕೃದ್ ಯಜ್ಞೀ ಯಜ್ಞಭುಗ್ ಯಜ್ಞಸಾಧನಃ ।
ಯಜ್ಞಾಂತಕೃದ್ ಯಜ್ಞಗುಹ್ಯಮನ್ನಮನ್ನಾದ ಏವ ಚ ।
॥ ೧೦೫ ॥ (೯೮೪)

ಆತ್ಮಯೋನಿಃ ಸ್ವಯಂಜಾತೋ ವೈಖಾನಃ ಸಾಮಗಾಯನಃ ।
ದೇವಕೀನಂದನಃ ಸ್ರಷ್ಟಾ ಕ್ಷಿತೀಶಃ ಪಾಪನಾಶನಃ
॥ ೧೦೬ ॥ (೯೯೨)

ಶಂಖಭೃನ್ನಂದಕೀ ಚಕ್ರೀ ಶಾರ್ಙ್ಗಧನ್ವಾ ಗದಾಧರಃ ।
ರಥಾಂಗಪಾಣಿರಕ್ಷೋಭ್ಯಃ ಸರ್ವಪ್ರಹರಣಾಯುಧಃ
॥ ೧೦೭ ॥ (೧೦೦೦)

# ಸಂಕೇತಾಕ್ಷರಗಳ ವಿವರ

| | |
|---|---|
| ಈ. ಉ. | ಈಶೋಪನಿಷತ್ |
| ಉದ್ಯೋಗ. | ಉದ್ಯೋಗಪರ್ವ |
| ಐ. ಉ. | ಐತರೇಯ ಉಪನಿಷತ್ |
| ಕ. ಉ. | ಕಠೋಪನಿಷತ್ |
| ಗೀತಾ. | ಭಗವದ್ಗೀತಾ |
| ಛಾ. ಉ. | ಛಾಂದೋಗ್ಯೋಪನಿಷತ್ |
| ತೈ. ಆ. | ತೈತ್ತಿರೀಯ ಆರಣ್ಯಕ |
| ತೈ. ಉ. | ತೈತ್ತಿರೀಯ ಉಪನಿಷತ್ |
| ತೈ. ಸಂ. | ತೈತ್ತಿರೀಯ ಸಂಹಿತಾ |
| ನಾ. ಉ. | ನಾರಾಯಣೋಪನಿಷತ್ |
| ಪು. ಸೂ. | ಪುರುಷಸೂಕ್ತ |
| ಬೃ. ಉ. | ಬೃಹದಾರಣ್ಯಕೋಪನಿಷತ್ |
| ಬೃ. ನಾ. ಉ. | ಬೃಹನ್ನಾರಾಯಣೋಪನಿಷತ್ |
| ಮಹಾ. | ಮಹಾಭಾರತ |
| ಮಾ. ಉ. | ಮಾಂಡೂಕ್ಯೋಪನಿಷತ್ |
| ಮುಂ. ಉ. | ಮುಂಡಕೋಪನಿಷತ್ |
| ವಾ. ರಾ. | ವಾಲ್ಮೀಕಿ ರಾಮಾಯಣ |
| ವಿ. ಪು. | ವಿಷ್ಣು ಪುರಾಣ |
| ವಿ. ಸ. | ವಿಷ್ಣು ಸಹಸ್ರನಾಮ |
| ಶಾಂತಿ. | ಶಾಂತಿಪರ್ವ |
| ಶುಕ್ಲ. ಯಜು. | ಶುಕ್ಲ ಯಜುರ್ವೇದ |
| ಶ್ವೇ. ಉ. | ಶ್ವೇತಾಶ್ವತರೋಪನಿಷತ್ |
| ಹರಿ. | ಹರಿವಂಶ |

# ಶ್ರೀವಿಷ್ಣುಸಹಸ್ರನಾಮಭಾಷ್ಯ

೧. **ವಿಶ್ವಮ್**— ಜಗತ್ಕಾರಣನು.

ಭಗವಂತನು ಜಗತ್ತಿಗೆ ಕಾರಣನಾಗಿರುವನಾದ್ದರಿಂದ ಅವನಿಗೆ ವಿಶ್ವ ಎಂದು ಹೆಸರು. ಅಥವಾ ಜಗತ್ತು ಪರಮಪುರುಷನಾದ ಪರಮಾತ್ಮನಿಂದ ಭಿನ್ನವಲ್ಲವಾದ್ದರಿಂದ ಪರಮಾತ್ಮನು ವಿಶ್ವವೆಂದು ಕರೆಯಲ್ಪಡುತ್ತಾನೆ.

'ಪುರುಷ ಏವೇದಂ ವಿಶ್ವಮ್' 'ಈ ವಿಶ್ವವು ಪುರುಷನೇ' (ಮುಂ. ಉ. ೨. ೧. ೧೦). 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' 'ಬ್ರಹ್ಮವು ಅದನ್ನು (ವಿಶ್ವವನ್ನು) ಸೃಷ್ಟಿಸಿ ಅದನ್ನೇ ಪ್ರವೇಶಿಸಿತು' (ತೈ. ಉ. ೨. ೬.)

೨. **ವಿಷ್ಣುಃ**—ಸರ್ವವ್ಯಾಪಕನು, ದೇಶಕಾಲವಸ್ತುಗಳಿಂದ ಅಪರಿಚ್ಛಿನ್ನನಾಗಿರುವವನು.

'ಯಚ್ಚ ಕಿಂಚಿಜ್ಜಗತ್‌ಸರ್ವಂ . . . ವ್ಯಾಪ್ಯ ನಾರಾಯಣಃ ಸ್ಥಿತಃ'—'ಇಡೀ ಜಗತ್ತನ್ನು—ಜಗತ್ತಿನಲ್ಲಿ ಏನೆಲ್ಲವನ್ನು ನಾವು ನೋಡುತ್ತೇವೋ ಮತ್ತು ಏನೆಲ್ಲವನ್ನು ನಾವು ಕೇಳುತ್ತೇವೋ, ಅದೆಲ್ಲವನ್ನು—ಒಳಗೂ ಹೊರಗೂ ನಾರಾಯಣನು ವ್ಯಾಪಿಸಿ ನಿಂತಿರುವನು' (ಬೃ. ನಾ. ಉ. ೧೩. ೧. ೨)

೩. **ವಷಟ್ಕಾರಃ**—ಯಜ್ಞಸ್ವರೂಪನು.

ಯಜ್ಞದಲ್ಲಿ ಭಗವಂತನನ್ನು ಉದ್ದೇಶಿಸಿ ವಷಟ್ಕಾರವು ಮಾಡಲ್ಪಡುವುದಾದ್ದರಿಂದ ಭಗವಂತನಿಗೆ ವಷಟ್ಕಾರ ಎಂದು ಹೆಸರು. ಅಥವಾ ಯಾವ ಯಜ್ಞದಲ್ಲಿ ವಷಟ್ಕಾರವು ಮಾಡಲ್ಪಡುವುದೋ ಆ ಯಜ್ಞಕ್ಕೆ ವಷಟ್ಕಾರ ಎಂದು ಹೇಳುತ್ತಾರೆ. ಯಜ್ಞವು ವಿಷ್ಣುವೇ ಆಗಿರುವನಾದ್ದರಿಂದ ವಿಷ್ಣುವಿಗೂ ವಷಟ್ಕಾರ ಎಂದು ಹೆಸರು.

'ಯಜ್ಞೋ ವೈ ವಿಷ್ಣುಃ' 'ಯಜ್ಞವು ವಿಷ್ಣುವೇ' (ತೈ. ಸಂ. ೧. ೭. ೪)

೪. **ಭೂತಭವ್ಯಭವತ್ಪ್ರಭುಃ**—ಭೂತ-ವರ್ತಮಾನ-ಭವಿಷ್ಯತ್‌ಕಾಲಗಳಿಗೆ ಪ್ರಭುವಾಗಿರುವವನು.

ಭಗವಂತನು ಸತ್ತಾಮಾತ್ರವೂ ಕಾಲಭೇದಗಳಿಗೆ ಅತೀತವೂ ಆಗಿರುವ ಐಶ್ವರ್ಯವುಳ್ಳವನಾದ್ದರಿಂದ ತ್ರಿಕಾಲಗಳಿಗೆ ಪ್ರಭುವಾಗಿರುವನು.

೫. **ಭೂತಕೃತ್**—ಭೂತಗಳನ್ನು ಸೃಷ್ಟಿಸುವವನು ಮತ್ತು ನಾಶಮಾಡುವವನು.

ಭಗವಂತನು ರಜೋಗುಣವನ್ನು ಆಶ್ರಯಿಸಿ ಬ್ರಹ್ಮರೂಪದಿಂದ ಸಮಸ್ತಭೂತಗಳನ್ನು ಸೃಷ್ಟಿಸುತ್ತಾನೆ ಮತ್ತು ತಮೋಗುಣವನ್ನು ಅವಲಂಬಿಸಿ ರುದ್ರರೂಪದಿಂದ ಭೂತಗಳನ್ನೆಲ್ಲ ನಾಶಮಾಡುತ್ತಾನೆ.

೬. **ಭೂತಭೃತ್**—(ಸತ್ತ್ವಗುಣವನ್ನು ಆಶ್ರಯಿಸಿ) ಭೂತಗಳಿಗೆ ಆಧಾರವಾಗಿರುವವನು.

ಅಥವಾ ಭೂತಗಳನ್ನು ರಕ್ಷಿಸುವವನು, ಪೋಷಿಸುವವನು.

೭. **ಭಾವಃ**—ಪ್ರಪಂಚರೂಪದಿಂದ ಹುಟ್ಟುವವನು.

ಅಥವಾ ಸತ್ತಾಮಾತ್ರನಾಗಿ ಇರುವವನು.

೮. **ಭೂತಾತ್ಮಾ**—ಸಕಲ ಭೂತಗಳ ಅಂತರ್ಯಾಮಿಯಾಗಿರುವವನು.

೯. **ಭೂತಭಾವನಃ**—ಭೂತಗಳನ್ನು ಹುಟ್ಟಿಸುವವನು.

ಅಥವಾ ಭೂತಗಳನ್ನು ಅಭಿವೃದ್ಧಿಗೊಳಿಸುವವನು.

೧೦. **ಪೂತಾತ್ಮಾ**—ಪವಿತ್ರವಾದ ಮತ್ತು ಶುದ್ಧವಾದ ಆತ್ಮವುಳ್ಳವನು.

ಭಗವಂತನಿಗೆ ಭೂತಕೃತ್ ಮೊದಲಾದ ಹೆಸರುಗಳಿರುವುದರಿಂದ ಭಗವಂತನು ಗುಣಗಳಿಗೆ ಅಧೀನನು ಎಂದು ಭಾವಿಸಬಾರದು. ಭಗವಂತನು ನಿರ್ಗುಣನು ಮತ್ತು ಪವಿತ್ರಾತ್ಮನು. ಗುಣಗಳೊಡನೆ ಇರುವ ಆವನ ಸಂಬಂಧವು ಸ್ವೇಚ್ಛೆಯಿಂದ ಉಂಟಾದುದೆಂದು ತಿಳಿಯಬೇಕು.

'ಕೇವಲೋ ನಿರ್ಗುಣಶ್ಚ' 'ಪರಮಾತ್ಮನು ಕೇವಲನು ಮತ್ತು ನಿರ್ಗುಣನು' (ಶ್ವೇ. ಉ. ೬. ೧೧).

೧೧. **ಪರಮಾತ್ಮಾ**—ಪರಮಶ್ರೇಷ್ಠನೂ ಆತ್ಮನೂ ಆಗಿರುವವನು.

ಭಗವಂತನು ಪರಮಶ್ರೇಷ್ಠನೂ ಆತ್ಮನೂ ಆಗಿರುವನಾದ್ದರಿಂದ ಅವನಿಗೆ ಪರಮಾತ್ಮನೆಂದು ಹೆಸರು. ಅವನು ಕಾರ್ಯಕಾರಣಗಳಿಂದ ಭಿನ್ನನಾಗಿರುವವನು ಮತ್ತು ನಿತ್ಯಶುದ್ಧಬುದ್ಧಮುಕ್ತಸ್ವಭಾವವುಳ್ಳವನು.

೧೨. **ಮುಕ್ತಾನಾಂ ಪರಮಾಗತಿಃ**—ಮುಕ್ತಪುರುಷರಿಗೆ ಪರಮಶ್ರೇಷ್ಠಗತಿಯಾಗಿರುವವನು.

ಮುಕ್ತಪುರುಷರು ಭಗವಂತನನ್ನು ಹೊಂದಿ ಪುನರಾವೃತ್ತಿಯನ್ನು (ಸಂಸಾರವನ್ನು) ಹೊಂದುವುದಿಲ್ಲ. ಆದುದರಿಂದ ಮುಕ್ತಪುರುಷರಿಗೆ ಭಗವಂತನು ಪರಮಶ್ರೇಷ್ಠಗತಿಯಾಗಿರುವನು.

'ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ' 'ಎಲೈ ಅರ್ಜುನ, ನನ್ನನ್ನು ಹೊಂದಿದರೆ ಪುನರ್ಜನ್ಮವಿಲ್ಲ' (ಗೀತಾ. ೮. ೧೬).

೧೩. **ಅವ್ಯಯಃ**—ವಿನಾಶವಾಗಲಿ ವಿಕಾರವಾಗಲಿ ಇಲ್ಲದವನು.

೧೪. **ಪುರುಷಃ**—ಶರೀರವೆಂಬ ಪುರದಲ್ಲಿ ಶಯನಮಾಡುವವನು.

ಅಥವಾ (ತಾನು) ಪೂರ್ಣನೂ (ಇತರರನ್ನು) ಪೂರ್ಣಗೊಳಿಸುವವನೂ ಆಗಿರುವವನು. ಅಥವಾ ಸಂಹಾರಕಾಲದಲ್ಲಿ ಲೋಕಗಳನ್ನೆಲ್ಲ ನಾಶಮಾಡುವವನು.

೧೫. ಸಾಕ್ಷೀ—ಯಾವ ತಡೆಯೂ ಇಲ್ಲದೆ ಸ್ವರೂಪಭೂತಜ್ಞಾನದಿಂದ ಎಲ್ಲವನ್ನೂ ನೋಡುತ್ತಿರುವವನು.

೧೬. ಕ್ಷೇತ್ರಜ್ಞಃ— ಕ್ಷೇತ್ರವನ್ನು ಎಂದರೆ ಶರೀರವನ್ನು ತಿಳಿದಿರುವವನು.

'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' 'ಕ್ಷೇತ್ರಜ್ಞನು ನಾನು ಎಂದು ತಿಳಿ' (ಗೀತಾ. ೧೩. ೨). 'ಕ್ಷೇತ್ರಾಣಿ ಹಿ ಶರೀರಾಣಿ... ತತಃ ಕ್ಷೇತ್ರಜ್ಞ ಉಚ್ಯತೇ' 'ಶರೀರಗಳೇ ಕ್ಷೇತ್ರಗಳು; ಶುಭಾಶುಭಕರ್ಮಗಳೇ ಬೀಜವು; ಯೋಗಾತ್ಮನಾದ ಭಗವಂತನು ಅವುಗಳನ್ನು ತಿಳಿದಿರುವನಾದ್ದರಿಂದ ಕ್ಷೇತ್ರಜ್ಞನೆಂದು ಕರೆಯಲ್ಪಡುತ್ತಾನೆ.' (ಮಹಾ. ಶಾಂತಿ. ೩೫೧. ೬)

೧೭. ಅಕ್ಷರಃ—ನಾಶವಿಲ್ಲದವನು.

ಕ್ಷೇತ್ರಜ್ಞನಾದ ಪರಮಾತ್ಮನಿಗೆ ನಾಶವಿಲ್ಲವಾದ್ದರಿಂದ ಅವನಿಗೆ ಅಕ್ಷರ ಎಂದು ಹೆಸರು.

೧೮. ಯೋಗಃ—ಯೋಗದಿಂದ ಪ್ರಾಪ್ಯನಾಗುವವನು.

ಮನಸ್ಸಿನೊಂದಿಗೆ ಸಮಸ್ತ ಜ್ಞಾನೇಂದ್ರಿಯಗಳನ್ನು ನಿಗ್ರಹಿಸಿ ಆತ್ಮ-ಪರಮಾತ್ಮರ ಏಕತ್ವವನ್ನು ಅರಿಯುವುದೇ ಯೋಗ. ಪರಮಾತ್ಮನು ಯೋಗದಿಂದ ಪ್ರಾಪ್ಯನಾದ್ದರಿಂದ ಅವನಿಗೂ ಯೋಗ ಎಂದು ಹೆಸರು.

೧೯. ಯೋಗವಿದಾಂ ನೇತಾ—ಯೋಗವಿದರ ಯೋಗಕ್ಷೇಮವನ್ನು ವಹಿಸುವವನು.

ಯೋಗವನ್ನು ಕುರಿತು ವಿಚಾರಿಸುವವರು, ಯೋಗವನ್ನು ಅರಿತವರು ಮತ್ತು ಯೋಗವನ್ನು ಹೊಂದಿದವರು—ಇವರೆಲ್ಲ ಯೋಗವಿದರು. ಭಗವಂತನು ಯೋಗವಿದರ ಯೋಗಕ್ಷೇಮವನ್ನು ವಹಿಸುತ್ತಾನೆ. ಆದುದರಿಂದ ಅವನು ಯೋಗವಿದರ ನೇತೃವು ಎಂದು ಹೇಳಿದೆ. 'ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್' 'ಆ ನಿತ್ಯಯುಕ್ತರಾದ (ಯೋಗಿಗಳ) ಯೋಗಕ್ಷೇಮವನ್ನು ನಾನು ವಹಿಸುತ್ತೇನೆ.' (ಗೀತಾ. ೯. ೨೨.)

೨೦. ಪ್ರಧಾನಪುರುಷೇಶ್ವರಃ—ಪ್ರಕೃತಿಗೂ ಜೀವನಿಗೂ ಸ್ವಾಮಿಯಾಗಿರುವವನು.

೨೧. ನಾರಸಿಂಹವಪುಃ—ಮನುಷ್ಯನ ಮತ್ತು ಸಿಂಹದ ಅವಯವಗಳುಳ್ಳ ಶರೀರವನ್ನು ಧರಿಸಿದವನು.

**೨೨. ಶ್ರೀಮಾನ್**—ಶ್ರೀಯಿಂದ ಕೂಡಿದವನು.

ವಿಷ್ಣುವಿನ ವಕ್ಷಸ್ಥಳದಲ್ಲಿ ಲಕ್ಷ್ಮಿಯು ಶಾಶ್ವತವಾಗಿ ನೆಲಸಿರುವಳಾದ್ದರಿಂದ ವಿಷ್ಣುವಿಗೆ ಶ್ರೀಮಾನ್ ಎಂದು ಹೆಸರು.

**೨೩. ಕೇಶವಃ**—ಸುಂದರವಾದ ಕೇಶಗಳುಳ್ಳವನು.

ಅಥವಾ ಬ್ರಹ್ಮ (ಕ), ವಿಷ್ಣು (ಅ) ಮತ್ತು ಶಿವ (ಈಶ)—ಈ ತ್ರಿಮೂರ್ತಿಗಳು ಕೇಶಗಳು. ಇವರು ಯಾರ ಅಧೀನದಲ್ಲಿರುವರೋ ಆ ಭಗವಂತನು ಕೇಶವನು. ಅಥವಾ ಕೇಶಿ ಎಂಬ ರಾಕ್ಷಸನನ್ನು ಕೊಂದದ್ದರಿಂದ ವಿಷ್ಣುವಿಗೆ ಕೇಶವ ಎಂದು ಹೆಸರು.

**೨೪. ಪುರುಷೋತ್ತಮಃ**—ಪುರುಷಶ್ರೇಷ್ಠನು.

'ಯಸ್ಮಾತ್ ಕ್ಷರಮತೀತೋಽಹಂ . . . ಪ್ರಥಿತಃ ಪುರುಷೋತ್ತಮಃ' 'ನಾನು ಕ್ಷರಕ್ಕೆ ಅತೀತನೂ ಅಕ್ಷರಕ್ಕಿಂತ ಉತ್ತಮನೂ ಆಗಿದ್ದೇನೆ; ಆದುದರಿಂದ ಲೋಕದಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನಾಗಿದ್ದೇನೆ.' (ಗೀತಾ. ೧೫. ೧೮)

**೨೫. ಸರ್ವಃ**—ಎಲ್ಲ ಸತ್-ಅಸತ್ ವಸ್ತುಗಳ ಉತ್ಪತ್ತಿಸ್ಥಾನ ಮತ್ತು ಲಯಸ್ಥಾನ—ಎರಡೂ ಆಗಿರುವವನು ಮತ್ತು ಎಲ್ಲ ವಸ್ತುಗಳನ್ನು ಯಾವಾಗಲೂ ತಿಳಿದಿರುವವನು.

**೨೬. ಶರ್ವಃ**—ಸಂಹಾರ ಸಮಯದಲ್ಲಿ ಸಕಲ ಪ್ರಜೆಗಳನ್ನು ಸಂಹಾರ ಮಾಡುವವನು ಅಥವಾ ಸಂಹರಿಸಲ್ಪಡುವಂತೆ ಮಾಡುವವನು.

**೨೭. ಶಿವಃ**—ಶುದ್ಧನಾಗಿರುವವನು.

ಭಗವಂತನು ನಿಸ್ತ್ರೈಗುಣ್ಯನಾದ್ದರಿಂದ ಶುದ್ಧನಾಗಿರುವನು; ಆದುದರಿಂದ ಅವನಿಗೆ ಶಿವ ಎಂದು ಹೆಸರು. ಶ್ರುತಿಯು ವಿಷ್ಣು, ಬ್ರಹ್ಮ ಮತ್ತು ಶಿವ–ಇವರಲ್ಲಿ ಅಭೇದವನ್ನು ಉಪದೇಶಿಸುತ್ತಿದೆ; ಆದುದರಿಂದ ಶಿವ ಮೊದಲಾದ ಹೆಸರುಗಳಿಂದ ವಿಷ್ಣುವೇ ಸ್ತುತಿಸಲ್ಪಡುತ್ತಾನೆ.

'ಸ ಬ್ರಹ್ಮಾ ಸ ಶಿವಃ' 'ಅವನೇ ಬ್ರಹ್ಮ, ಅವನೇ ಶಿವ' (ಬೃ. ನಾ. ಉ).

**೨೮. ಸ್ಥಾಣುಃ**—ಸ್ಥಿರವಾಗಿರುವವನು.

**೨೯. ಭೂತಾದಿಃ**—ಸಕಲ ಭೂತಗಳ ಆದಿಕಾರಣನು.

**೩೦. ನಿಧಿರವ್ಯಯಃ**—ನಾಶರಹಿತವಾದ ನಿಧಿಯಾಗಿರುವವನು.

ಭಗವಂತನು ಪ್ರಲಯಕಾಲದಲ್ಲಿ ಸಕಲ ವಸ್ತುಗಳಿಗೆ ಆಶ್ರಯಸ್ಥಾನವಾಗುತ್ತಾನೆ; ಆದುದರಿಂದ ಅವನು ನಿಧಿಯು; ಮತ್ತು ನಾಶರಹಿತನಾದ್ದರಿಂದ ಅವ್ಯಯನು.

೩೧. ಸಂಭವಃ—ಸ್ವೇಚ್ಛೆಯಿಂದ ಯೋಗ್ಯರೀತಿಯಲ್ಲಿ ಹುಟ್ಟುವವನು.

'ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ', 'ಧರ್ಮವನ್ನು ಸ್ಥಾಪಿಸುವುದಕ್ಕಾಗಿ ಪ್ರತಿಯೊಂದು ಯುಗದಲ್ಲಿಯೂ ಹುಟ್ಟುತ್ತೇನೆ.' (ಗೀತಾ. ४. ८.)

೩೨. ಭಾವನಃ—ಸಮಸ್ತ ಭೋಕ್ತೃಗಳ ಫಲಗಳನ್ನು ಉಂಟುಮಾಡುವವನು.

೩೩. ಭರ್ತಾ—ಪ್ರಪಂಚಕ್ಕೆ ನೆಲೆಯಾಗಿ ಆಧಾರವಾಗಿರುವವನು.

೩೪. ಪ್ರಭವಃ—ಪ್ರಕೃಷ್ಟವಾದ ಜನ್ಮವುಳ್ಳವನು.

ಅಥವಾ ಮಹಾಭೂತಗಳು ಪ್ರಕೃಷ್ಟವಾದ ರೀತಿಯಲ್ಲಿ ಭಗವಂತನಿಂದ ಸೃಷ್ಟಿಸಲ್ಪಡುತ್ತವೆ; ಆದುದರಿಂದ ಭಗವಂತನಿಗೆ ಪ್ರಭವ ಎಂದು ಹೆಸರು.

೩೫. ಪ್ರಭುಃ—ಸಕಲ ಕಾರ್ಯಗಳಲ್ಲಿ ಅತಿಶಯವಾದ ಸಾಮರ್ಥ್ಯವುಳ್ಳವನು.

೩೬. ಈಶ್ವರಃ—ನಿರುಪಾಧಿಕವಾದ ಐಶ್ವರ್ಯವುಳ್ಳವನು.

'ಏಷ ಸರ್ವೇಶ್ವರಃ' 'ಈತನೇ (ಭಗವಂತನೇ) ಸರ್ವೇಶ್ವರನು' (ಮಾ.ಉ.೬).

೩೭. ಸ್ವಯಂಭೂಃ—ತಾನಾಗಿಯೇ ಹುಟ್ಟುವವನು.

ಅಥವಾ ಸ್ವಯಂಭೂ ಎಂದರೆ ತಾನಾಗಿಯೇ ಸ್ವತಂತ್ರನಾಗಿರುವ (ಪರತಂತ್ರನಲ್ಲದ) ಪರಮೇಶ್ವರನು.

೩೮. ಶಂಭುಃ—ಭಕ್ತರಿಗೆ ಸುಖವನ್ನು ಉಂಟುಮಾಡುವವನು.

೩೯. ಆದಿತ್ಯಃ—ಹನ್ನೆರಡು ಆದಿತ್ಯರಲ್ಲಿ ಶ್ರೇಷ್ಠನಾದ ಆದಿತ್ಯನಾಗಿರುವವನು.

ಅಥವಾ ವಿಷ್ಣುವು ಅದಿತಿಯ ಎಂದರೆ ಅಖಂಡಿತಳಾದ ಪೃಥ್ವಿಯ ಒಡೆಯನಾದ್ದರಿಂದ ಆತನಿಗೆ ಆದಿತ್ಯ ಎಂದು ಹೆಸರು. ಅಥವಾ ಒಬ್ಬನೇ ಒಬ್ಬ ಆದಿತ್ಯನು ಎಂದರೆ ಸೂರ್ಯನು ಅನೇಕ ಜಲಪಾತ್ರಗಳಲ್ಲಿ ಹೇಗೆ ಅನೇಕವಾಗಿ ಕಾಣುತ್ತಾನೋ ಹಾಗೆಯೇ ಒಬ್ಬನೇ ಒಬ್ಬನಾದ ಪರಮಾತ್ಮನು ಅನೇಕ ಶರೀರಗಳಲ್ಲಿ ಅನೇಕವಾಗಿ ಕಾಣುತ್ತಾನೆ. ಹೀಗೆ ಪರಮಾತ್ಮನಿಗೂ ಆದಿತ್ಯನಿಗೂ ಇರುವ ಸಾಧರ್ಮ್ಯದಿಂದ ಪರಮಾತ್ಮನು ಆದಿತ್ಯನೆಂದು ಕರೆಯಲ್ಪಡುತ್ತಾನೆ.

೪೦. ಪುಷ್ಕರಾಕ್ಷಃ—ತಾವರೆಯಂತೆ ಸುಂದರವಾದ ಕಣ್ಣುಗಳುಳ್ಳವನು.

೪೧. **ಮಹಾಸ್ವನಃ**—ಶ್ರುತಿರೂಪವಾದ ಮಹಾನ್ ನಾದವುಳ್ಳವನು.

'ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ ಋಗ್ವೇದೋ ಯಜುರ್ವೇದಃ' 'ಋಗ್ವೇದ ಯಜುರ್ವೇದಗಳು ಈ ಮಹಾಭೂತನಾದ ಪರಮಾತ್ಮನ ನಿಃಶ್ವಾಸಗಳು' (ಬೃ. ಉ. ೨. ೪. ೧೦).

೪೨. **ಅನಾದಿನಿಧನಃ**—ಜನನಮರಣಗಳೆರಡೂ ಇಲ್ಲದವನು.

೪೩. **ಧಾತಾ**—ಅನಂತ (ಆದಿಶೇಷ) ಮೊದಲಾದವರ ರೂಪದಿಂದ ವಿಶ್ವವನ್ನು ಎತ್ತಿಹಿಡಿದಿರುವವನು.

೪೪. **ವಿಧಾತಾ**—ಕರ್ಮಗಳನ್ನೂ ಅವುಗಳ ಫಲಗಳನ್ನೂ ಉಂಟುಮಾಡುವವನು.

೪೫. **ಧಾತುರುತ್ತಮಃ**—ಆದಿಶೇಷ ಮೊದಲಾದವರಿಗೂ ಆಧಾರನಾಗಿರುವವನು.

ಅಥವಾ ಭಗವಂತನು ಪೃಥ್ವಿ ಮೊದಲಾದ ಸಕಲಧಾತುಗಳಿಗಿಂತ ಉತ್ಕೃಷ್ಟವಾದ 'ಚಿತ್' ಎಂಬ ಧಾತುವಾಗಿರುವನಾದ್ದರಿಂದ ಅವನಿಗೆ ಧಾತುರುತ್ತಮನೆಂದು ಹೆಸರು. ಅಥವಾ ಧಾತಾ ಎಂದರೆ ಬ್ರಹ್ಮ; ವಿಷ್ಣುವು ಬ್ರಹ್ಮನಿಗಿಂತಲೂ ಶ್ರೇಷ್ಠನಾದ್ದರಿಂದ ಧಾತುರುತ್ತಮನು.

೪೬. **ಅಪ್ರಮೇಯಃ**—ಸರ್ವಪ್ರಮಾಣಗಳಿಂದಲೂ ಅವೇದ್ಯನಾಗಿರುವವನು.

ಪರಮಾತ್ಮನು ಶಬ್ದಾದಿರಹಿತನಾದ್ದರಿಂದ ಪ್ರತ್ಯಕ್ಷಪ್ರಮಾಣಕ್ಕೆ ವಿಷಯನಲ್ಲ; ಅವನಿಗೆ ವ್ಯಾಪ್ತಿಲಿಂಗವಿಲ್ಲವಾದ್ದರಿಂದ ಅನುಮಾನಕ್ಕೂ ವಿಷಯನಲ್ಲ; ಭಾಗರಹಿತನಾದ್ದರಿಂದ ಪರಮಾತ್ಮನನ್ನು ಯಾವುದಕ್ಕೂ ಹೋಲಿಸಲಾಗುವುದಿಲ್ಲ. ಆದುದರಿಂದ ಉಪಮಾನಸಿದ್ಧನಲ್ಲ; ಪರಮಾತ್ಮನು ಹೊರತು ಅನುಪಪದ್ಯಮಾನವಾದ ವಸ್ತುವು ಬೇರೊಂದಿಲ್ಲವಾದ್ದರಿಂದ ಪರಮಾತ್ಮನು ಅರ್ಥಾಪತ್ತಿಯಿಂದಲೂ ಗ್ರಾಹ್ಯನಲ್ಲ; ಪರಮಾತ್ಮನು ಭಾವಮಾತ್ರನು (ಸತ್ತಾಮಾತ್ರನು) ಆಗಿರುವನಾದ್ದರಿಂದ ಮತ್ತು ಅಭಾವಕ್ಕೆ ಸಾಕ್ಷಿಯಾಗಿರುವನಾದ್ದರಿಂದ ಅಭಾವಕ್ಕೂ ಗೋಚರನಲ್ಲ; ಪರಮಾತ್ಮನಿಗೆ ಪ್ರಮಾಣಜನ್ಯವಾದ ಅತಿಶಯವಿಲ್ಲವಾದ್ದರಿಂದ ಶಾಸ್ತ್ರಪ್ರಮಾಣದಿಂದಲೂ ವೇದ್ಯನಲ್ಲ. ಆದುದರಿಂದ ಪರಮಾತ್ಮನು ಅಪ್ರಮೇಯನು. ಪರಮಾತ್ಮನು ಹೀಗೆ ಯಾವ ಪ್ರಮಾಣಕ್ಕೂ ವಿಷಯನಲ್ಲವಾದರೆ, ಅವನು ಶಾಸ್ತ್ರಯೋನಿ ಎಂಬುದು ಹೇಗೆ? ಅದಕ್ಕೆ ಹೀಗೆ ಉತ್ತರ ಹೇಳಬಹುದು: ಪ್ರಕಾಶಸ್ವರೂಪನಾದ ಪರಮಾತ್ಮನು ಪ್ರಮಾಣಾದಿಗಳಿಗೆಲ್ಲ ಸಾಕ್ಷಿಯಾಗಿರುವನಾದ್ದರಿಂದ ಅವುಗಳಿಗೆ (ಪ್ರಮಾಣಗಳಿಗೆ) ವಿಷಯನಲ್ಲವಾದರೂ, ಪರಮಾತ್ಮನ ಮೇಲೆ ಅಧ್ಯಾರೋಪಿತವಾದ ಅತದ್ರೂಪವನ್ನು ಶಾಸ್ತ್ರಗಳು ಪರಿಹರಿಸುತ್ತವೆ. ಆದುದರಿಂದ ಪರಮಾತ್ಮನು ಶಾಸ್ತ್ರಪ್ರಮಾಣದಿಂದ ವೇದ್ಯನು.

ಅಥವಾ ಪರಮಾತ್ಮನು ಸಾಕ್ಷಿರೂಪನಾದ್ದರಿಂದ ಅಪ್ರಮೇಯನು.

೪೭. **ಹೃಷೀಕೇಶಃ**—ಇಂದ್ರಿಯಗಳಿಗೆ ಒಡೆಯನಾಗಿರುವವನು.

ಹೃಷೀಕ ಎಂದರೆ ಇಂದ್ರಿಯ; ಹೃಷೀಕೇಶ ಎಂದರೆ ಇಂದ್ರಿಯಗಳಿಗೆಲ್ಲ ಒಡೆಯನಾಗಿ ಕ್ಷೇತ್ರಜ್ಞರೂಪದಿಂದಿರುವ ಪರಮಾತ್ಮನು. ಅಥವಾ ಸೂರ್ಯರೂಪನೂ ಚಂದ್ರರೂಪನೂ ಆಗಿರುವ ಯಾವನಿಗೆ ಜಗತ್ತಿಗೆ ಹಿತವನ್ನು ಮತ್ತು ಆಹ್ಲಾದವನ್ನು ಉಂಟುಮಾಡುವ ಕೇಶಗಳು ಎಂದರೆ ರಶ್ಮಿಗಳು ಇರುವುವೋ ಆ ಭಗವಂತನು ಹೃಷೀಕೇಶನು.

೪೮. **ಪದ್ಮನಾಭಃ**—ಪದ್ಮನಾಭನು.

ಸರ್ವಜಗತ್ಕಾರಣರೂಪವಾದ ಪದ್ಮವು ವಿಷ್ಣುವಿನ ನಾಭಿಯಲ್ಲಿರುವುದರಿಂದ ವಿಷ್ಣುವಿಗೆ ಪದ್ಮನಾಭ ಎಂದು ಹೆಸರು.

೪೯. **ಅಮರಪ್ರಭುಃ**—ಅಮರರಿಗೆಲ್ಲ (ದೇವತೆಗಳಿಗೆಲ್ಲ) ಪ್ರಭುವಾಗಿರುವವನು.

೫೦. **ವಿಶ್ವಕರ್ಮಾ**—ಜಗತ್ತನ್ನು ನಿರ್ಮಾಣಮಾಡಿದವನು.

ಅಥವಾ ಭಗವಂತನು ವಿಶ್ವಕರ್ಮನೆಂದು ಪ್ರಸಿದ್ಧನಾಗಿರುವ ತ್ವಷ್ಟೃವಿಗೆ ಸಮಾನನಾಗಿರುವನಾದ್ದರಿಂದ ಭಗವಂತನಿಗೆ ವಿಶ್ವಕರ್ಮನೆಂದು ಹೆಸರು.

೫೧. **ಮನುಃ**—ಮನನಮಾಡುವವನು, ವಿಚಾರಮಾಡುವವನು.

'ನಾನ್ಯೋಽತೋಽಸ್ತಿ ಮಂತಾ' 'ಇವನಿಗಿಂತ (ಪರಮಾತ್ಮನಿಗಿಂತ) ಬೇರೆ ಮಂತೃವು (ಮನನಮಾಡುವವನು) ಯಾವನೂ ಇಲ್ಲ' (ಬೃ. ಉ. ೩. ೭. ೨೩).

೫೨. **ತ್ವಷ್ಟಾ**—ಸಂಹಾರಕಾಲದಲ್ಲಿ ಸರ್ವಭೂತಗಳನ್ನು ಕ್ಷೀಣವಾಗುವಂತೆ ಮಾಡುವವನು.

೫೩. **ಸ್ಥವಿಷ್ಠಃ**—ಅತಿಶಯವಾಗಿ ಸ್ಥೂಲವಾಗಿರುವವನು.

೫೪. **ಸ್ಥವಿರಃ ಧ್ರುವಃ**—ಪುರಾತನನು ಮತ್ತು ಸ್ಥಿರವಾಗಿರುವವನು.

ಭಗವಂತನು ಪುರಾತನನಾದ್ದರಿಂದ ಸ್ಥವಿರನು; ಮತ್ತು ಸ್ಥಿರವಾಗಿರುವವನಾದ್ದರಿಂದ ಧ್ರುವನು.

೫೫. **ಅಗ್ರಾಹ್ಯಃ**—ಕರ್ಮೇಂದ್ರಿಯಗಳಿಂದ ಗ್ರಹಿಸಲ್ಪಡಲು ಅಸಾಧ್ಯನಾಗಿರುವವನು.

'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' 'ಯಾವುದರಿಂದ (ಅದನ್ನು) ಹೊಂದದೆ ವಾಕ್ಕುಗಳು ಮನಸ್ಸಿನೊಂದಿಗೆ ಹಿಂದಿರುಗುವುವೋ' (ತೈ. ಉ. ೨. ೯).

೫೬. **ಶಾಶ್ವತಃ**—ಎಂದೆಂದಿಗೂ ಇರುವವನು, ಸನಾತನನು.

'ಶಾಶ್ವತಂ ಶಿವಮಚ್ಯುತಮ್' '(ಭಗವಂತನು) ಶಾಶ್ವತನೂ ಶಿವನೂ ಮತ್ತು ಅಚ್ಯುತನೂ (ಆಗಿರುವನು)' (ನಾ. ಉ. ೧೩. ೩).

**೫೭. ಕೃಷ್ಣಃ** — ಸಚ್ಚಿದಾನಂದಸ್ವರೂಪನು ಅಥವಾ ಕೃಷ್ಣವರ್ಣವುಳ್ಳವನು.

'ಕೃಷಾಮಿ ಪೃಥಿವೀಂ ಪಾರ್ಥ....ತಸ್ಮಾತ್ ಕೃಷ್ಣೋಽಹಮರ್ಜುನ' 'ಎಲೈ ಅರ್ಜುನ, ನಾನು ಕಪ್ಪು ಕಬ್ಬಿಣದ ನೇಗಿಲಿನ ರೂಪವನ್ನು ಧರಿಸಿ ಪೃಥಿವಿಯನ್ನು ಉಳುತ್ತೇನೆ ಮತ್ತು ನನ್ನ ವರ್ಣವು ಕೃಷ್ಣವರ್ಣವು. ಆದುದರಿಂದ ನಾನು ಕೃಷ್ಣನು' (ಮಹಾ. ಶಾಂತಿ. ೩೪೨. ೭೮).

**೫೮. ಲೋಹಿತಾಕ್ಷಃ**—ಕೆಂಬಣ್ಣದ ಕಣ್ಣುಗಳುಳ್ಳವನು.

**೫೯. ಪ್ರತರ್ದನಃ**—ಪ್ರಲಯಕಾಲದಲ್ಲಿ ಸಕಲಭೂತಗಳನ್ನು ಸಂಹಾರ ಮಾಡುವವನು.

**೬೦. ಪ್ರಭೂತಃ**—ಜ್ಞಾನೈಶ್ವರ್ಯಾದಿ ಗುಣಗಳಿಂದ ಕೂಡಿದವನು.

**೬೧. ತ್ರಿಕಕುಬ್ಧಾಮ** — ಊರ್ಧ್ವದಿಕ್ಕು, ಮಧ್ಯದಿಕ್ಕು ಮತ್ತು ಅಧೋದಿಕ್ಕು—ಈ ಮೂರು ದಿಕ್ಕುಗಳಿಗೂ ನೆಲೆಯಾಗಿರುವವನು.

**೬೨. ಪವಿತ್ರಮ್**—ಪುನೀತಮಾಡುವ (ಪರಿಶುದ್ಧಮಾಡುವ) ದೇವತೆಯಾಗಿ ಅಥವಾ ಋಷಿಯಾಗಿ ಇರುವವನು.

**೬೩. ಮಂಗಲಂ ಪರಮ್**—ಕಲ್ಯಾಣರೂಪನಾಗಿರುವವನು ಮತ್ತು ಸಮಸ್ತ ಭೂತಗಳಿಗಿಂತ ಉತ್ಕೃಷ್ಟನಾಗಿರುವವನು.

'ಅಶುಭಾನಿ ನಿರಾಚಷ್ಟೇ....ಬ್ರಹ್ಮ ತನ್ಮಂಗಲಂ ವಿದುಃ' 'ಸ್ಮರಣಮಾತ್ರದಿಂದ ಭಗವಂತನು ಮನುಷ್ಯರ ಅಶುಭಗಳನ್ನು ದೂರಮಾಡಿ ಶುಭಸಂತತಿಯನ್ನು ಕೊಡುತ್ತಾನೆ. ಆದುದರಿಂದ ಭಗವಂತನು ಮಂಗಲನೆಂದು ಹೇಳುತ್ತಾರೆ' (ವಿಷ್ಣು.)

**೬೪. ಈಶಾನಃ**—ಸಕಲಭೂತಗಳನ್ನು ಆಳುವವನು.

**೬೫. ಪ್ರಾಣದಃ**—ಪ್ರಾಣಗಳನ್ನು ಕೊಡುವವನು.

ಅಥವಾ ಪ್ರಾಣಗಳನ್ನು ಚಲಿಸುವಂತೆ ಮಾಡುವವನು ಅಥವಾ ಮೃತ್ಯುರೂಪದಿಂದ ಪ್ರಾಣಗಳನ್ನು ಹರಣಮಾಡುವವನು ಅಥವಾ ಪ್ರಾಣಗಳನ್ನು ಶುದ್ಧಮಾಡುವವನು.

'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್' '(ಪರಮಾತ್ಮನಿಲ್ಲದೆ ಹೋದರೆ) ಯಾರು ಉಸಿರಾಡಬಲ್ಲರು? ಯಾರು ಜೀವಿಸಬಲ್ಲರು?' (ತೈ. ಉ. ೨. ೭.)

**೬೬. ಪ್ರಾಣಃ**— ಉಸಿರಾಡುವವನು (ಕ್ಷೇತ್ರಜ್ಞನು ಅಥವಾ ಪರಮಾತ್ಮನು).

'ಪ್ರಾಣಸ್ಯ ಪ್ರಾಣಂ' 'ಪ್ರಾಣದ ಪ್ರಾಣವಾಗಿರುವವನು ಅಥವಾ ಮುಖ್ಯಪ್ರಾಣವಾಗಿರುವವನು' (ಬೃ. ಉ. ೪. ೪. ೧೮).

೬೭. ಜ್ಯೇಷ್ಠಃ—ಸಮಸ್ತ ಭೂತಗಳಿಗಿಂತ ಅತ್ಯಧಿಕವಾಗಿ ಹಿರಿಯ ನಾಗಿರುವವನು ಅಥವಾ ಸರ್ವಕ್ಕೂ ಕಾರಣನಾಗಿರುವವನು.

೬೮. ಶ್ರೇಷ್ಠಃ—ಶ್ಲಾಘ್ಯತಮನು, ಸರ್ವಾತಿಶಯನು.

೬೯. ಪ್ರಜಾಪತಿಃ—ಸಮಸ್ತ ಪ್ರಜೆಗಳಿಗೆ ಒಡೆಯನಾಗಿರುವವನು.

೭೦. ಹಿರಣ್ಯಗರ್ಭಃ—ಹಿರಣ್ಯಗರ್ಭನು.

ಹಿರಣ್ಮಯವಾದ ಅಂಡದೊಳಗೆ ಇರುವವನಾದ್ದರಿಂದ ಬ್ರಹ್ಮನಿಗೆ ಹಿರಣ್ಯಗರ್ಭ ನೆಂದು ಹೆಸರು. ಭಗವಂತನು ಬ್ರಹ್ಮನ ಆತ್ಮನಾಗಿರುವವನಾದ್ದರಿಂದ ಅವನೂ ಹಿರಣ್ಯಗರ್ಭನೆಂದು ಕರೆಯಲ್ಪಡುತ್ತಾನೆ.

೭೧. ಭೂಗರ್ಭಃ—ಭೂಮಿಯನ್ನು ತನ್ನ ಗರ್ಭದಲ್ಲಿ ಧರಿಸಿರುವವನು.

೭೨. ಮಾಧವಃ—ಶ್ರೀಗೆ ಎಂದರೆ ಲಕ್ಷ್ಮೀದೇವಿಗೆ ಪತಿಯಾಗಿರು ವವನು.

ಅಥವಾ ಭಗವಂತನು ಮಧುವಿದ್ಯೆಯಿಂದ ತಿಳಿಯಲ್ಪಡುವವನಾದ್ದರಿಂದ ಮಾಧವನೆಂದು ಕರೆಯಲ್ಪಡುತ್ತಾನೆ.

೭೩. ಮಧುಸೂದನಃ—ಮಧು ಎಂಬ ಅಸುರನನ್ನು ಕೊಂದವನು.

'ಕರ್ಣಮಿಶ್ರೋದ್ಭವಂ ಚಾಪಿ....ಮಷಯಶ್ಚ ಜನಾರ್ದನಮ್' 'ಪುರುಷೋ ತ್ತಮನು ಬ್ರಹ್ಮನ ಮಾತನ್ನು ಗೌರವಿಸಿ ಕರ್ಣಮಿಶ್ರನ ಮಗನಾದ ಮಧು ಎಂಬ ಅಸುರನನ್ನು ಕೊಂದನು. ಅದುದರಿಂದಲೇ, ದೇವತೆಗಳು, ದಾನವರು ಮತ್ತು ಮಾನವರು ಜನಾರ್ದನನನ್ನು ಮಧುಸೂದನ ಎಂದು ಕರೆಯುತ್ತಾರೆ' (ಮಹಾ. ಭೀಷ್ಮ. ೬೭. ೧೪-೧೬).

೭೪. ಈಶ್ವರಃ—ಸರ್ವಶಕ್ತಿಸಂಪನ್ನನು.

೭೫. ವಿಕ್ರಮೀ—ಶೌರ್ಯದಿಂದ ಕೂಡಿರುವವನು.

೭೬. ಧನ್ವೀ—ಧನುಸ್ಸನ್ನು ಧರಿಸಿದವನು.

'ರಾಮಃ ಶಸ್ತ್ರಭೃತಾಮಹಮ್' 'ಶಸ್ತ್ರಧಾರಿಗಳಲ್ಲಿ ನಾನು ಶ್ರೀರಾಮನು.' (ಗೀತಾ. ೧೦. ೩೧).

೭೭. ಮೇಧಾವೀ—ಅನೇಕ ಗ್ರಂಥಗಳನ್ನು ಧಾರಣಮಾಡುವ ಸಾಮರ್ಥ್ಯವುಳ್ಳವನು.

೭೮. ವಿಕ್ರಮಃ—ಹೆಜ್ಜೆಗಳಿಂದ ಜಗತ್ತನ್ನು ಅಳೆದವನು.

ಅಥವಾ ಗರುಡಪಕ್ಷಿಯ ದ್ವಾರಾ ಪ್ರಯಾಣಮಾಡುವವನು.

೭೯. ಕ್ರಮಃ—ನಡೆಯುವವನು.

ಚಲಿಸುವವನು ಅಥವಾ ಚಲನೆಗೆ ಕಾರಣನಾಗಿರುವವನು.

೮೦. ಅನುತ್ತಮಃ—ತನಗಿಂತ ಉತ್ತಮರಾದವರು ಯಾರೂ ಇಲ್ಲದವನು.

'ಯಸ್ಮಾತ್ ಪರಂ ನಾಪರಮಸ್ತಿ ಕಿಂಚಿತ್' 'ಯಾವನಿಗಿಂತ (ಪರಮಾತ್ಮನಿಗಿಂತ) ಶ್ರೇಷ್ಠವಾದುದು ಯಾವುದೂ ಇಲ್ಲವೋ' (ನಾ. ಉ. ೧೨. ೧೩). 'ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ' 'ನಿನಗೆ ಸಮಾನನಾದವನು ಯಾವನೂ ಇಲ್ಲ. ಹೀಗಿರುವಾಗ ನಿನಗಿಂತ ಶ್ರೇಷ್ಠನಾದವನು ಅನ್ಯನು ಎಲ್ಲಿರುವನು?' (ಗೀತಾ. ೧೧.೪೩).

೮೧. ದುರಾಧರ್ಷಃ—ದೈತ್ಯಾದಿಗಳಿಂದ ಆಕ್ರಮಿಸಲ್ಪಡಲು ಅಸಾಧ್ಯನಾಗಿರುವವನು.

೮೨. ಕೃತಜ್ಞಃ—ಪ್ರಾಣಿಗಳು ಮಾಡುವ ಪುಣ್ಯಾಪುಣ್ಯರೂಪವಾದ ಕರ್ಮಗಳನ್ನು ತಿಳಿಯುವವನು.

ಅಥವಾ ಭಕ್ತಿಯಿಂದ ಪತ್ರಪುಷ್ಪಾದಿ ಅಲ್ಪವಸ್ತುಗಳನ್ನು ಸಮರ್ಪಿಸುವವರಿಗೂ ಮೋಕ್ಷವನ್ನು ಕೊಡುವವನು.

೮೩. ಕೃತಿಃ—ಪುರುಷಪ್ರಯತ್ನಕ್ಕೆ ಆಧಾರನಾಗಿರುವವನು.

ಪುರುಷರು ಮಾಡುವ ಪ್ರಯತ್ನಕ್ಕೆ ಅಥವಾ ಕ್ರಿಯೆಗೆ ಕೃತಿ ಎಂದು ಹೇಳುತ್ತಾರೆ. ಭಗವಂತನು ಸರ್ವಾತ್ಮಕನಾದ್ದರಿಂದ ಅಥವಾ ಪುರುಷಪ್ರಯತ್ನಕ್ಕೆ ಮತ್ತು ಪುರುಷಕ್ರಿಯೆಗೆ ಆಧಾರನಾಗಿರುವವನಾದ್ದರಿಂದ ಅವನಿಗೂ ಕೃತಿ ಎಂದು ಹೆಸರು.

೮೪. ಆತ್ಮವಾನ್—ತನ್ನ ಮಹಿಮೆಯಲ್ಲಿ ಪ್ರತಿಷ್ಠಿತನಾಗಿರುವವನು.

'ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ' 'ಭಗವಂತನು ಯಾವುದರಲ್ಲಿ ಪ್ರತಿಷ್ಠಿತನಾಗಿದ್ದಾನೆ? ತನ್ನ ಮಹಿಮೆಯಲ್ಲಿಯೇ ಪ್ರತಿಷ್ಠಿತನಾಗಿದ್ದಾನೆ.' (ಛಾ. ಉ. ೭. ೨೪. ೧).

೮೫. ಸುರೇಶಃ—ದೇವತೆಗಳಿಗೆಲ್ಲ ಪ್ರಭುವಾಗಿರುವವನು.

ಅಥವಾ ಶುಭವನ್ನುಂಟುಮಾಡುವವರಿಗೆಲ್ಲ ಒಡೆಯನಾಗಿರುವವನು.

೮೬. ಶರಣಮ್—ದುಃಖಿಗಳ ದುಃಖವನ್ನು ಹೋಗಲಾಡಿಸುವವನು.

೮೭. ಶರ್ಮ—ಪರಮಾನಂದಸ್ವರೂಪನು.

೮೮. ವಿಶ್ವರೇತಾಃ—ಜಗತ್ತಿಗೆ ಕಾರಣನಾಗಿರುವವನು.

೮೯. ಪ್ರಜಾಭವಃ—ತನ್ನ ಸಾನ್ನಿಧ್ಯದಿಂದ ಸರ್ವಪ್ರಜೆಗಳು ಉದ್ಭವಿಸುವಂತೆ ಮಾಡುವವನು.

೯೦. ಅಹಃ—ಪ್ರಕಾಶರೂಪನು.

೯೧. ಸಂವತ್ಸರಃ—ಸಂವತ್ಸರನು.

ಕಾಲರೂಪದಿಂದ ವಿಷ್ಣುವು ಸಂವತ್ಸರನೆಂದು ಕರೆಯಲ್ಪಡುತ್ತಾನೆ.

**೯೨. ವ್ಯಾಲಃ**—ಸರ್ಪದಂತೆ ಹಿಡಿಯಲು ಅಸಾಧ್ಯವಾಗಿರುವವನು.

ಸರ್ಪವನ್ನು ಹಿಡಿಯುವುದು ಅಶಕ್ಯವಾಗಿರುವ ಹಾಗೆ ಪರಮಾತ್ಮನನ್ನು ಗ್ರಹಿಸುವುದೂ ಅಶಕ್ಯವು.

**೯೩. ಪ್ರತ್ಯಯಃ**—ಪ್ರಜ್ಞಾಸ್ವರೂಪನಾಗಿರುವವನು.

'ಪ್ರಜ್ಞಾನಂ ಬ್ರಹ್ಮ' 'ಪ್ರಜ್ಞಾನವು ಬ್ರಹ್ಮ' (ಐ. ಉ. ೩. ೩).

**೯೪. ಸರ್ವದರ್ಶನಃ**—ಸರ್ವದರ್ಶನನು.

ಭಗವಂತನು ಸರ್ವಾತ್ಮಕನಾದ್ದರಿಂದ ಸಮಸ್ತ ಕಣ್ಣುಗಳೆಲ್ಲ ಭಗವಂತನವುಗಳಾಗಿರುವುವು ಆದುದರಿಂದ ಭಗವಂತನು ಸರ್ವದರ್ಶನನು.

'ವಿಶ್ವತಶ್ಚಕ್ಷುಃ' 'ಎಲ್ಲಾ ಕಡೆಗಳಲ್ಲೂ ಕಣ್ಣುಗಳುಳ್ಳವನು.' (ಶ್ವೇ. ಉ. ೩. ೩). 'ವಿಶ್ವಾಕ್ಷಮ್' 'ಅನೇಕ ಕಣ್ಣುಗಳುಳ್ಳವನು' (ನಾ. ಉ. ೧೩. ೧).

**೯೫. ಅಜಃ**—ಎಂದಿಗೂ ಹುಟ್ಟು ಇಲ್ಲದವನು.

'ನ ಹಿ ಜಾತೋ ನ ಜಾಯೇಽಹಂ....ತಸ್ಮಾದಹಮಜಃ ಸ್ಮೃತಃ' 'ನಾನು ಹಿಂದೆ ಎಂದೂ ಹುಟ್ಟಿಲ್ಲ, ಇಂದೂ ಹುಟ್ಟುವುದಿಲ್ಲ ಮತ್ತು ಮುಂದೆ ಎಂದಿಗೂ ಹುಟ್ಟುವವನಲ್ಲ. ನಾನು ಸಕಲ ಭೂತಗಳ ಕ್ಷೇತ್ರಜ್ಞನೂ ಆಗಿರುವೆನಾದ್ದರಿಂದ ಅಜನೆಂದು ಕರೆಯಲ್ಪಡುತ್ತೇನೆ' (ಮಹಾ ಶಾಂತಿ. ೩೪೨. ೭೪).

**೯೬. ಸರ್ವೇಶ್ವರಃ**—ಸಮಸ್ತ ಈಶ್ವರರಿಗೂ ಈಶ್ವರನಾಗಿರುವವನು.

**೯೭. ಸಿದ್ಧಃ**—ನಿತ್ಯಸಿದ್ಧಸ್ವರೂಪನು.

**೯೮. ಸಿದ್ಧಿಃ**—ಸರ್ವವಸ್ತುಗಳಲ್ಲಿ ಸಂವಿದ್‌ರೂಪದಿಂದಿರುವವನು.

ಅಥವಾ ನಿರತಿಶಯರೂಪದಿಂದಿರುವವನು ಅಥವಾ ಫಲರೂಪದಿಂದಿರುವವನು. ಸ್ವರ್ಗಾದಿಗಳು ವಿನಾಶವುಳ್ಳವುಗಳಾದ್ದರಿಂದ ವಾಸ್ತವವಾಗಿ ಫಲಗಳಲ್ಲ.

**೯೯. ಸರ್ವಾದಿಃ**—ಸಕಲಭೂತಗಳಿಗೆ ಆದಿಕಾರಣನಾಗಿರುವವನು.

**೧೦೦. ಅಚ್ಯುತಃ**—ಅಚ್ಯುತನು.

ಭಗವಂತನು ತನ್ನ ಸ್ವರೂಪಸಾಮರ್ಥ್ಯದಿಂದ ಹಿಂದೆ ಎಂದೂ ಚ್ಯುತನಾಗಿಲ್ಲ, ಈಗಲೂ ಚ್ಯುತನಾಗುವುದಿಲ್ಲ ಮತ್ತು ಇನ್ನು ಮುಂದೆಯೂ ಚ್ಯುತನಾಗುವವನಲ್ಲ, ಆದುದರಿಂದ ಅವನು ಅಚ್ಯುತನು.

'ಶಾಶ್ವತಂ ಶಿವಮಚ್ಯುತಮ್' '(ಭಗವಂತನು) ಶಾಶ್ವತನು, ಕಲ್ಯಾಣಸ್ವರೂಪನು ಮತ್ತು ಅಚ್ಯುತನು' (ನಾ. ಉ. ೧೩. ೩).

**೧೦೧. ವೃಷಾಕಪಿಃ**—ಧರ್ಮಸ್ವರೂಪನು ಅಥವಾ ವರಾಹರೂಪವನ್ನು ಧರಿಸಿದವನು.

ಧರ್ಮವು ಸರ್ವ ಇಷ್ಟಾರ್ಥಗಳನ್ನು ವರ್ಷಿಸುತ್ತದೆ. ಆದುದರಿಂದ ಅದು ವೃಷ ಎಂದು ಕರೆಯಲ್ಪಡುತ್ತದೆ. ವರಾಹವು ಪೃಥ್ವಿಯನ್ನು ಜಲದಿಂದ ಉದ್ಧರಿಸಿತು;

ಆದುದರಿಂದ ಅದು ಕಪಿ ಎಂದು ಹೇಳಲ್ಪಡುತ್ತದೆ. ವಿಷ್ಣುವು ಧರ್ಮಸ್ವರೂಪನೂ ವರಾಹರೂಪವನ್ನು ಧರಿಸಿದವನೂ ಆಗಿರುವನಾದ್ದರಿಂದ ಅವನಿಗೆ ವೃಷಾಕಪಿ ಎಂದು ಹೆಸರು.

೧೦೨. **ಅಮೇಯಾತ್ಮಾ**—ಅಳೆಯಲಿಕ್ಕೆ ಬಾರದ ಸ್ವರೂಪವುಳ್ಳವನು.

ಭಗವಂತನ ಆತ್ಮವು (ಸ್ವರೂಪವು) ಇಷ್ಟೇ ಎಂದು ಅಳೆಯಲು ಬರುವುದಿಲ್ಲ. ಆದುದರಿಂದ ಭಗವಂತನಿಗೆ ಅಮೇಯಾತ್ಮಾ ಎಂದು ಹೆಸರು.

೧೦೩. **ಸರ್ವಯೋಗವಿನಿಸ್ಸೃತಃ**—ಸಕಲ ಸಂಬಂಧಗಳಿಂದ ರಹಿತನಾಗಿರುವವನು.

ಅಥವಾ ನಾನಾ ಶಾಸ್ತ್ರಗಳಲ್ಲಿ ಹೇಳಿರುವ ಯೋಗದಿಂದ ದೂರವಿರುವವನು (ಅಗೋಚರನಾಗಿರುವವನು).

'ಅಸಂಗೋ ಹ್ಯಯಂ ಪುರುಷಃ' 'ಈ ಪುರುಷನು ನಿಜವಾಗಿ ಸಂಗರಹಿತನು.' (ಬೃ. ಉ. ೪. ೩. ೧೫.)

೧೦೪. **ವಸುಃ**—ವಾಸಸ್ಥಾನವಾಗಿರುವವನು.

ಸಕಲ ಭೂತಗಳು ಭಗವಂತನಲ್ಲಿ ನೆಲಸಿರುವುವಾದ್ದರಿಂದ ಅಥವಾ ಭಗವಂತನು ಸರ್ವಭೂತಗಳಲ್ಲಿ ನೆಲಸಿರುವನಾದ್ದರಿಂದ ಅವನಿಗೆ ವಸು ಎಂದು ಹೆಸರು.

ಅಥವಾ 'ವಸೂನಾಂ ಪಾವಕಶ್ಚಾಸ್ಮಿ' '(ಅಷ್ಟ) ವಸುಗಳಲ್ಲಿ ಪಾವಕ (ಎಂಬ ವಸುವು) ಆಗಿದ್ದೇನೆ' (ಗೀತಾ. ೧೦. ೨೩).

೧೦೫. **ವಸುಮನಾಃ**—ಪ್ರಶಸ್ತವಾದ ಮನಸ್ಸುಳ್ಳವನು.

ಭಗವಂತನ ಮನಸ್ಸು ರಾಗದ್ವೇಷಾದಿಕ್ಲೇಶಗಳಿಂದ ಮತ್ತು ಮದವೇ ಮೊದಲಾದ ಉಪಕ್ಲೇಶಗಳಿಂದ ಕಲುಷಿತವಾಗಿಲ್ಲವಾದ್ದರಿಂದ ಅದು ಪ್ರಶಸ್ತವಾಗಿರುವುದು.

೧೦೬. **ಸತ್ಯಃ**—ಸತ್ಯಸ್ವರೂಪನು.

ಅಥವಾ ಭಗವಂತನು ಮೂರ್ತರೂಪನೂ ಅಮೂರ್ತರೂಪನೂ ಆಗಿರುವನಾದ್ದರಿಂದ ಅವನಿಗೆ ಸತ್ಯ ಎಂದು ಹೆಸರು. ಅಥವಾ ಸತ್ಪುರುಷರಲ್ಲಿ ಸಾಧುಸ್ವಭಾವವಾಗಿರುವವನು.

'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಬ್ರಹ್ಮವು ಸತ್ಯವೂ ಜ್ಞಾನವೂ ಅನಂತವೂ (ಆಗಿರುವುದು)' (ತೈ. ಉ. ೨. ೧. ೧).

೧೦೭. **ಸಮಾತ್ಮಾ**—ರಾಗದ್ವೇಷಾದಿಗಳಿಂದ ದೂಷಿತವಾಗದೆ ಸಮಭಾವದಿಂದ ಇರುವ ಮನಸ್ಸುಳ್ಳವನು.

ಅಥವಾ ಸಮಸ್ತ ಭೂತಗಳಲ್ಲಿ ಸಮನೂ ಏಕನೂ ಆಗಿರುವ ಆತ್ಮನಾದ್ದರಿಂದ ಭಗವಂತನಿಗೆ ಸಮಾತ್ಮಾ ಎಂದು ಹೆಸರು.

೧೦೮. **ಸಮ್ಮಿತಃ**—ಸಕಲ ಪದಾರ್ಥಗಳಿಂದಲೂ ಪರಿಚ್ಛಿನ್ನನಾಗಿರುವವನು, ಅಥವಾ,

(ಅಸಮ್ಮಿತಃ—ಸಕಲಪದಾರ್ಥಗಳಿಂದಲೂ ಅಪರಿಚ್ಛಿನ್ನನಾಗಿರುವವನು ಮತ್ತು ಅಮಿತನಾಗಿರುವವನು.)

೧೦೯. **ಸಮಃ**—ಸದಾಕಾಲವೂ ಸರ್ವವಿಕಾರಗಳಿಂದ ರಹಿತನಾಗಿರುವವನು.

ಅಥವಾ ಲಕ್ಷ್ಮಿಯೊಂದಿಗೆ ಒಡಗೂಡಿರುವವನಾದ್ದರಿಂದ ವಿಷ್ಣುವಿಗೆ ಸಮ ಎಂದು ಹೆಸರು.

೧೧೦. **ಅಮೋಘಃ**—ಅಮೋಘನು.

ತನ್ನನ್ನು ಪೂಜಿಸುವವರಿಗೆ, ಸ್ತುತಿಸುವವರಿಗೆ ಮತ್ತು ಸ್ಮರಿಸುವವರಿಗೆ ಸರ್ವ ಫಲಗಳನ್ನು ಕೊಟ್ಟು ಅವರು ಮಾಡುವ ಪೂಜೆ, ಸ್ತುತಿ ಮತ್ತು ಸ್ಮರಣೆ–ಇವುಗಳನ್ನು ವ್ಯರ್ಥಗೊಳಿಸದವನು. ಅಥವಾ ಭಗವಂತನು ಸತ್ಯಸಂಕಲ್ಪನಾದ್ದರಿಂದ ಅಮೋಘನು.

೧೧೧. **ಪುಂಡರೀಕಾಕ್ಷಃ**—ಹೃದಯಕಮಲದಲ್ಲಿ ಕಾಣಲ್ಪಡುವವನು ಅಥವಾ ಕಮಲದಂತೆ ಆಕಾರವುಳ್ಳ ಕಣ್ಣುಗಳುಳ್ಳವನು.

೧೧೨. **ವೃಷಕರ್ಮಾ**—ಧರ್ಮರೂಪವಾದ ಕರ್ಮವುಳ್ಳವನು.

೧೧೩. **ವೃಷಾಕೃತಿಃ**—ಧರ್ಮಸ್ಥಾಪನೆಗೋಸ್ಕರ ಶರೀರವನ್ನು ಧರಿಸುವವನು.

'ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ' 'ಧರ್ಮಸ್ಥಾಪನೆಗೋಸ್ಕರ ಪ್ರತಿಯೊಂದು ಯುಗದಲ್ಲೂ ಹುಟ್ಟುತ್ತೇನೆ' (ಗೀತಾ ೪. ೮).

೧೧೪. **ರುದ್ರಃ**—ಪ್ರಲಯಕಾಲದಲ್ಲಿ ಪ್ರಜೆಗಳನ್ನು ಸಂಹರಿಸಿ ಅವರು ಅಳುವಂತೆ ಮಾಡುವವನು.

ಅಥವಾ ದುಃಖವನ್ನು ಅಥವಾ ದುಃಖದ ಕಾರಣವನ್ನು ದೂರಮಾಡುವವನು.

೧೧೫. **ಬಹುಶಿರಾಃ**—ಅನೇಕ ಶಿರಸ್ಸುಗಳುಳ್ಳವನು.

'ಸಹಸ್ರಶೀರ್ಷಾ ಪುರುಷಃ' 'ಪುರುಷನು ಸಹಸ್ರ ಶಿರಸ್ಸುಗಳುಳ್ಳವನು' (ಪು. ಸೂ. ೧).

೧೧೬. **ಬಭ್ರುಃ**—ಲೋಕಗಳನ್ನೆಲ್ಲ ಹೊತ್ತುಕೊಂಡಿರುವವನು.

೧೧೭. **ವಿಶ್ವಯೋನಿಃ**—ವಿಶ್ವಕ್ಕೆ ಕಾರಣನಾಗಿರುವವನು.

೧೧೮. **ಶುಚಿಶ್ರವಾಃ**— ಪವಿತ್ರವಾದವುಗಳೂ ಶ್ರವಣಮಾಡತಕ್ಕವುಗಳೂ ಆಗಿರುವ ಹೆಸರುಗಳುಳ್ಳವನು.

೧೧೯. **ಅಮೃತಃ**—ಮರಣವಿಲ್ಲದವನು.

೧೨೦. **ಶಾಶ್ವತಸ್ಥಾಣುಃ**—ಶಾಶ್ವತನೂ ಸ್ಥಿರನೂ ಆಗಿರುವವನು.

೧೨೧. **ವರಾರೋಹಃ**—ಶ್ರೇಷ್ಠವಾದ ತೊಡೆಯುಳ್ಳವನು.

ಅಥವಾ ಭಗವಂತನಲ್ಲಿ ಆರೂಢವಾಗುವುದು ಶ್ರೇಷ್ಠವಾದುದಾದ್ದರಿಂದ ಭಗವಂತನಿಗೆ ವರಾರೋಹ ಎಂದು ಹೆಸರು. ಭಗವಂತನಲ್ಲಿ ಆರೂಢರಾದವರಿಗೆ ಪುನರಾವೃತ್ತಿಯು (ಎಂದರೆ ಸಂಸಾರವನ್ನು ಪುನಃ ಹೊಂದುವುದು) ಇರುವುದಿಲ್ಲ. ಆದುದರಿಂದ ಭಗವಂತನಲ್ಲಿ ಆರೂಢವಾಗುವುದು ಶ್ರೇಷ್ಠವಾದುದು.

'ಯದ್ ಗತ್ವಾ ನ ನಿವರ್ತಂತೇ ತದ್ ಧಾಮ ಪರಮಂ ಮಮ' 'ಯಾವುದನ್ನು ಹೊಂದಿ (ಭಕ್ತರು ಸಂಸಾರಕ್ಕೆ) ಹಿಂದಿರುಗುವುದಿಲ್ಲವೋ ಅದು ನನ್ನ ಶ್ರೇಷ್ಠವಾದ ನೆಲೆಯಾಗಿರುವುದು' (ಗೀತಾ ೧೫. ೬).

**೧೨೨. ಮಹಾತಪಾಃ**—ಮಹತ್ತಾದ ತಪಸ್ಸುಳ್ಳವನು.

ಸೃಷ್ಟಿವಿಷಯಕವಾದ ಭಗವಂತನ ತಪಸ್ಸು ಎಂದರೆ ಜ್ಞಾನವು ಮಹತ್ತಾದುದು. ಆದುದರಿಂದ ಭಗವಂತನಿಗೆ ಮಹಾತಪ ಎಂದು ಹೆಸರು. ಅಥವಾ ಭಗವಂತನ ಐಶ್ವರ್ಯರೂಪವಾದ ಅಥವಾ ಪ್ರತಾಪರೂಪವಾದ ತಪಸ್ಸು ಮಹತ್ತಾದುದು. ಆದುದರಿಂದ ಭಗವಂತನಿಗೆ ಮಹಾತಪ ಎಂದು.

'ಯಸ್ಯ ಜ್ಞಾನಮಯಂ ತಪಃ' 'ಯಾವನ (ಭಗವಂತನ) ತಪಸ್ಸು ಜ್ಞಾನಮಯವಾದುದೋ' (ಮುಂ. ಉ. ೧. ೧. ೯).

**೧೨೩. ಸರ್ವಗಃ**— ಕಾರಣರೂಪದಿಂದ ಸರ್ವತ್ರವೂ ವ್ಯಾಪಿಸಿರುವವನು.

**೧೨೪. ಸರ್ವವಿದ್ಭಾನುಃ**—ಎಲ್ಲವನ್ನೂ ತಿಳಿದಿರುವವನು ಅಥವಾ ಹೊಂದಿದವನು ಮತ್ತು ಪ್ರಕಾಶಮಾನನಾಗಿರುವವನು.

'ತಮೇವ ಭಾಂತಮನುಭಾತಿ ಸರ್ವಮ್' 'ಅವನು (ಪರಮಾತ್ಮನು) ಪ್ರಕಾಶಿಸಲು (ಅವನಿಂದಲೇ) ಎಲ್ಲವೂ ಪ್ರಕಾಶಿಸುವುದು' (ಕ. ಉ. ೨. ೨. ೧೫). 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ .... ತತ್ತೇಜೋ ವಿದ್ಧಿ ಮಾಮಕಮ್' 'ಸೂರ್ಯನಲ್ಲಿರುವ ಯಾವ ತೇಜಸ್ಸು ಅಖಿಲ ಜಗತ್ತನ್ನು ಪ್ರಕಾಶಗೊಳಿಸುತ್ತದೋ .... ಆ ತೇಜಸ್ಸು ನನ್ನದೆಂದು ತಿಳಿ' (ಗೀತಾ ೧೫. ೧೨).

**೧೨೫. ವಿಷ್ವಕ್ಸೇನಃ**—ವಿಷ್ವಕ್ಸೇನನು.

ಯುದ್ಧೋದ್ಯೋಗಮಾತ್ರದಿಂದಲೇ ದೈತ್ಯಸೈನ್ಯವೆಲ್ಲವನ್ನು ಸರ್ವದಿಕ್ಕುಗಳಲ್ಲೂ ಪಲಾಯನಗೈಯುವಂತೆ ಮಾಡುವವನಾದ್ದರಿಂದ ಭಗವಂತನಿಗೆ ವಿಷ್ವಕ್ಸೇನ ಎಂದು ಹೆಸರು.

**೧೨೬. ಜನಾರ್ದನಃ**—ದುರ್ಜನರನ್ನು ಸಂಹಾರಮಾಡುವವನು.

ಅಥವಾ ನರಕಾದಿಲೋಕಗಳಿಗೆ ಹೋಗುವಂತೆ ಮಾಡುವವನು. ಅಥವಾ ಭಗವಂತನು ಅಭ್ಯುದಯನಿಃಶ್ರೇಯಸ್ಸುಗಳ ರೂಪವಾದ ಪುರುಷಾರ್ಥಕ್ಕೋಸ್ಕರ ಜನರಿಂದ ಯಾಚಿಸಲ್ಪಡುತ್ತಾನೆ; ಆದುದರಿಂದ ಅವನಿಗೆ ಜನಾರ್ದನ ಎಂದು ಹೆಸರು.

**೧೨೭. ವೇದಃ**—ವೇದರೂಪನು.

ಅಥವಾ ಜ್ಞಾನವನ್ನು ಹೊಂದುವಂತೆ ಮಾಡುವವನು.

'ತೇಷಾಮೇವಾನುಕಂಪಾರ್ಥಂ....ಜ್ಞಾನದೀಪೇನ ಭಾಸ್ವತಾ' 'ನಿತ್ಯಯುಕ್ತರೂ ನನ್ನನ್ನು ಪ್ರೀತಿಯಿಂದ ಭಜಿಸುವವರೂ ಆದ ಭಕ್ತರಿಗೆ ಅನುಕಂಪೆಯನ್ನು ತೋರಿಸಲಿಕ್ಕಾಗಿ ನಾನು ಅವರ ಬುದ್ಧಿಯಲ್ಲಿ ಅವಸ್ಥಿತನಾಗಿ ಪ್ರಕಾಶಿಸುತ್ತಿರುವ ಜ್ಞಾನದೀಪದಿಂದ ಅಜ್ಞಾನದಿಂದ ಹುಟ್ಟಿದ ತಮಸ್ಸನ್ನು ನಾಶಮಾಡುತ್ತೇನೆ' (ಗೀತಾ ೧೦.೧೧).

**೧೨೮. ವೇದವಿತ್**—ವೇದವನ್ನೂ ವೇದಾರ್ಥವನ್ನೂ ಯಥಾವತ್ತಾಗಿ ತಿಳಿದಿರುವವನು.

'ವೇದಾಂತಕೃದ್ ವೇದವಿದೇವ ಚಾಹಮ್' 'ವೇದಾಂತವನ್ನು ಮಾಡಿದವನೂ ವೇದವನ್ನು ತಿಳಿದವನೂ ನಾನೇ' (ಗೀತಾ ೧೫. ೧೫).

**೧೨೯. ಅವ್ಯಂಗಃ**— ಜ್ಞಾನಾದಿಗಳಿಂದ ಪರಿಪೂರ್ಣನಾಗಿರುವವನು (ಎಂದರೆ ಯಾವ ದೋಷವೂ ಇಲ್ಲದವನು).

ಅಥವಾ ಭಗವಂತನು ವ್ಯಕ್ತಿ ಇಲ್ಲದವನು ಎಂದರೆ ಅವ್ಯಕ್ತನು; ಆದುದರಿಂದ ಅವ್ಯಂಗನು.

'ಅವ್ಯಕ್ತೋಽಯಮ್' 'ಈತನು(ಪರಮಾತ್ಮನು)ಅವ್ಯಕ್ತನು' (ಗೀತಾ ೨.೨೫)

**೧೩೦. ವೇದಾಂಗಃ**—ವೇದಗಳು ಅಂಗಗಳಾಗಿರುವವನು.

**೧೩೧. ವೇದವಿತ್**—ವೇದಗಳನ್ನು ಕುರಿತು ವಿಚಾರಮಾಡುವವನು.

**೧೩೨. ಕವಿಃ**—ಕ್ರಾಂತದರ್ಶಿ ಅಥವಾ ಸರ್ವದೃಕ್; ಎಂದರೆ ಎಲ್ಲವನ್ನೂ ನೋಡುವವನು.

'ನಾನ್ಯೋಽತೋಽಸ್ತಿ ದ್ರಷ್ಟಾ' '(ಪರಮಾತ್ಮನು ಹೊರತು) ಅನ್ಯ ದ್ರಷ್ಟೃವು ಯಾವನೂ ಇಲ್ಲ' (ಬೃ. ಉ. ೩. ೭. ೨೩). 'ಕವಿರ್ಮನೀಷೀ' (ಭಗವಂತನು) 'ಕವಿಯು ಮತ್ತು ಸರ್ವಜ್ಞನು' (ಈ. ಉ. ೮).

**೧೩೩. ಲೋಕಾಧ್ಯಕ್ಷಃ**—ಲೋಕಗಳಿಗೆಲ್ಲ ಅಧ್ಯಕ್ಷನಾಗಿರುವವನು.

ಸಕಲ ಲೋಕಗಳನ್ನು ಪ್ರಧಾನವಾಗಿ ನೋಡಿಕೊಳ್ಳುತ್ತಿರುವವನು.

**೧೩೪. ಸುರಾಧ್ಯಕ್ಷಃ**—ಲೋಕಪಾಲಾದಿ ದೇವತೆಗಳಿಗೆಲ್ಲ ಅಧ್ಯಕ್ಷನಾಗಿರುವವನು (ಎಂದರೆ ಒಡೆಯನಾಗಿರುವವನು).

**೧೩೫. ಧರ್ಮಾಧ್ಯಕ್ಷಃ** — ಧರ್ಮಾಧರ್ಮಗಳನ್ನು ಸಾಕ್ಷಾತ್ತಾಗಿ ನೋಡುವವನು.

ಭಗವಂತನು ಉಚಿತವಾದ ಫಲಗಳನ್ನು ಕೊಡುವುದಕ್ಕಾಗಿ ಧರ್ಮಾಧರ್ಮಗಳನ್ನು ಸಾಕ್ಷಾತ್ತಾಗಿ ನೋಡುತ್ತಾನೆ. ಆದುದರಿಂದ ಅವನಿಗೆ ಧರ್ಮಾಧ್ಯಕ್ಷನೆಂದು ಹೆಸರು.

**೧೩೬. ಕೃತಾಕೃತಃ**—ಕಾರ್ಯನೂ ಕಾರಣನೂ ಆಗಿರುವವನು.

ಭಗವಂತನು ಕಾರ್ಯರೂಪದಿಂದ ಕೃತನೂ ಕಾರಣರೂಪದಿಂದ ಅಕೃತನೂ ಆಗಿರುವನಾದ್ದರಿಂದ ಅವನಿಗೆ ಕೃತಾಕೃತನೆಂದು ಹೆಸರು.

**೧೩೭. ಚತುರಾತ್ಮಾ**—ನಾಲ್ಕು ವಿಭೂತಿಗಳುಳ್ಳವನು.

ಜಗತ್‌ಸೃಷ್ಟಿ ಮೊದಲಾದುವುಗಳಿಗೋಸ್ಕರ ಭಗವಂತನಿಗೆ ನಾಲ್ಕು ಪ್ರತ್ಯೇಕ ವಿಭೂತಿಗಳಿವೆ. ಈ ವಿಭೂತಿಗಳು ಅವನ ನಾಲ್ಕು ಮೂರ್ತಿಗಳು. ಆದುದರಿಂದ ಭಗವಂತನು ಚತುರಾತ್ಮನು.

'ಬ್ರಹ್ಮಾ ದಕ್ಷಾದಯಃ ಕಾಲಃ....ಜಗತಃ ಸೃಷ್ಟಿಹೇತವಃ' 'ಬ್ರಹ್ಮ, ದಕ್ಷ ಪ್ರಜಾಪತಿ ಮೊದಲಾದವರು, ಕಾಲ ಮತ್ತು ಸಮಸ್ತ ಜೀವಿಗಳು—ಇವು ಜಗತ್ ಸೃಷ್ಟಿಗೆ ಹೇತುವಾಗುವ ಭಗವಂತನ ನಾಲ್ಕು ವಿಭೂತಿಗಳು' (ವಿಷ್ಣು ೧. ೨೨. ೩೧).

**೧೩೮. ಚತುರ್ವ್ಯೂಹಃ**—ನಾಲ್ಕು ವ್ಯೂಹಗಳುಳ್ಳವನು.

ವಿಷ್ಣುವು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂಬ ನಾಲ್ಕು ವ್ಯೂಹಗಳಾಗಿ (ಭಾಗಗಳಾಗಿ) ಜಗತ್‌ಸೃಷ್ಟಿ ಮೊದಲಾದವುಗಳನ್ನು ಮಾಡುತ್ತಾನೆ; ಆದುದರಿಂದ ಚತುರ್ವ್ಯೂಹನು.

**೧೩೯. ಚತುರ್ದಂಷ್ಟ್ರಃ**—ನಾಲ್ಕು ಕೋರೆಹಲ್ಲುಗಳುಳ್ಳವನು.

ಭಗವಂತನು ನಾಲ್ಕು ಕೋರೆಹಲ್ಲುಗಳುಳ್ಳ ನೃಸಿಂಹರೂಪವನ್ನು ಧರಿಸಿದವನಾದ್ದರಿಂದ ಅವನಿಗೆ ಚತುರ್ದಂಷ್ಟ್ರನೆಂದು ಹೆಸರು.

ಅಥವಾ ಹಲ್ಲುಗಳಂತಿರುವ ನಾಲ್ಕುಕೊಂಬುಗಳುಳ್ಳವನು.

'ಚತ್ವಾರಿಶೃಂಗಾಃ' '(ಭಗವಂತನಿಗೆ) ನಾಲ್ಕು ಕೊಂಬುಗಳು' (ಋಗ್ವೇದ).

**೧೪೦. ಚತುರ್ಭುಜಃ**—ನಾಲ್ಕು ಭುಜಗಳುಳ್ಳವನು.

**೧೪೧. ಭ್ರಾಜಿಷ್ಣುಃ**—ಪ್ರಕಾಶಮಯವಾದ ಸ್ವರೂಪವುಳ್ಳವನು.

**೧೪೨. ಭೋಜನಮ್**—ಪ್ರಕೃತಿರೂಪನು.

ಪ್ರಕೃತಿಯು ಅಥವಾ ಮಾಯೆಯು ಭೋಜ್ಯರೂಪಳಾದ್ದರಿಂದ ಭೋಜನ ಎಂದು ಕರೆಯಲ್ಪಡುತ್ತಾಳೆ. ಭಗವಂತನು ಪ್ರಕೃತಿರೂಪನಾದ್ದರಿಂದ ಅವನಿಗೂ ಭೋಜನ ಎಂದು ಹೆಸರು.

**೧೪೩. ಭೋಕ್ತಾ**—ಪುರುಷರೂಪದಿಂದ ಪ್ರಕೃತಿಯನ್ನು ಭೋಗಿಸುವವನು.

**೧೪೪. ಸಹಿಷ್ಣುಃ**—ಹಿರಣ್ಯಾಕ್ಷ ಮೊದಲಾದವರನ್ನು ಸೋಲಿಸಿದವನು.

**೧೪೫. ಜಗದಾದಿಜಃ**— ಜಗದಾದಿಯಲ್ಲಿ ಹಿರಣ್ಯಗರ್ಭರೂಪದಿಂದ ಸ್ವಯಂ ಹುಟ್ಟುವವನು.

**೧೪೬. ಅನಘಃ**—ಪಾಪರಹಿತನು.

**೧೪೭. ವಿಜಯಃ**—ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ ಮೊದಲಾದ ಗುಣಗಳಿಂದ ವಿಶ್ವವನ್ನು ಅತಿಶಯಿಸುವವನು.

**೧೪೮. ಜೇತಾ**—ಸ್ವಭಾವತಃ ಸಕಲಭೂತಗಳಿಗಿಂತ ಅಧಿಕನಾಗಿರುವವನು.

**೧೪೯. ವಿಶ್ವಯೋನಿಃ**—ವಿಶ್ವವು ತನ್ನ ಯೋನಿಯಾಗಿರುವವನು.

ಅಥವಾ ಭಗವಂತನೇ ವಿಶ್ವವೂ ಯೋನಿಯೂ ಆಗಿರುವನಾದ್ದರಿಂದ ಅವನಿಗೆ ವಿಶ್ವಯೋನಿ ಎಂದು ಹೆಸರು.

**೧೫೦. ಪುನರ್ವಸುಃ**—ಪುನಃ ಪುನಃ ಶರೀರಗಳಲ್ಲಿ ಕ್ಷೇತ್ರಜ್ಞರೂಪದಿಂದ ವಾಸಮಾಡುವವನು.

**೧೫೧. ಉಪೇಂದ್ರಃ**—ಇಂದ್ರನಿಗೆ ತಮ್ಮನಾಗಿ ಹುಟ್ಟಿದವನು.

ಅಥವಾ ಇಂದ್ರನು ವಿಷ್ಣುವಿಗಿಂತ ಮೇಲಿನವನಾದ್ದರಿಂದ (ಎಂದರೆ ಹಿರಿಯುವನಾದ್ದರಿಂದ) ವಿಷ್ಣುವು ಉಪೇಂದ್ರನು.

**೧೫೨. ವಾಮನಃ** — ವಾಮನರೂಪದಿಂದ ಬಲಿಯನ್ನು ಯಾಚಿಸಿದವನು.

ಅಥವಾ ಭಗವಂತನು ವಿಶೇಷವಾಗಿ ಭಜಿಸಲ್ಪಡತಕ್ಕವನಾದ್ದರಿಂದ ಅವನಿಗೆ ವಾಮನ ಎಂದು ಹೆಸರು.

'ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ' '(ಹೃದಯಕಮಲದ) ಮಧ್ಯದಲ್ಲಿ ಆಸೀನನಾಗಿರುವ ವಾಮನನನ್ನು ದೇವತೆಗಳೆಲ್ಲಾ ಉಪಾಸನೆ ಮಾಡುತ್ತಾರೆ' (ಕ. ಉ. ೨. ೩. ೫).

**೧೫೩. ಪ್ರಾಂಶುಃ**—ಉನ್ನತಾಕಾರವನ್ನು ತಾಳಿದವನು.

ವಾಮನರೂಪವನ್ನು ಧರಿಸಿದ ಭಗವಂತನು ಮೂರು ಲೋಕಗಳನ್ನು ಅಳೆಯುವಾಗ ಉನ್ನತಾಕಾರವನ್ನು ತಾಳಿದನು. ಆದುದರಿಂದ ಅವನಿಗೆ ಪ್ರಾಂಶು ಎಂದು ಹೆಸರು.

'ತೋಯೇ ತು ಪತಿತೇ ಹಸ್ತೇ....ಚಂದ್ರಾದಿತ್ಯೌ ಚ ಚಕ್ಷುಷೀ' 'ವಾಮನರೂಪವನ್ನು ಧರಿಸಿದ ಭಗವಂತನು ದಾನಜಲವು ಕೈಯಲ್ಲಿ ಬಿದ್ದೊಡನೆಯೇ ಅವಾಮನನಾಗಿ ಸರ್ವದೇವಮಯವಾದ ರೂಪವನ್ನು ತೋರಿಸಿದನು. ಭೂಮಿಯೇ ಅವನ

ಚರಣಗಳು, ಆಕಾಶವೇ ಅವನ ಶಿರಸ್ಸು ಮತ್ತು ಸೂರ್ಯಚಂದ್ರರೇ ಅವನ ಕಣ್ಣುಗಳು ಆಗಿದ್ದುವು' (ಹರಿ. ೩. ೭೧. ೪೩-೪೪).

೧೫೪. **ಅಮೋಘಃ**—ವ್ಯರ್ಥವಾಗದ ಲೀಲೆಗಳುಳ್ಳವನು.

೧೫೫. **ಶುಚಿಃ**—ತನ್ನನ್ನು ಸ್ಮರಿಸುವವರನ್ನು, ಸ್ತುತಿಸುವವರನ್ನು ಮತ್ತು ಪೂಜಿಸುವವರನ್ನು ಪವಿತ್ರರನ್ನಾಗಿ ಮಾಡುವವನು.

'ಅಸ್ಯ ಸ್ಪರ್ಶಸ್ಯ ಮಹಾನ್ ಶುಚಿಃ' 'ಈತನ (ಭಗವಂತನ) ಸ್ಪರ್ಶವು ಬಹಳ ಪವಿತ್ರವಾದುದು' (ಎಂಬ ಮಂತ್ರವುಂಟು).

೧೫೬. **ಊರ್ಜಿತಃ**—ಪ್ರಕೃಷ್ಟವಾದ ಬಲವುಳ್ಳವನು.

೧೫೭. **ಅತೀಂದ್ರಃ**— ಸ್ವಭಾವಸಿದ್ಧವಾದವುಗಳಾದ ಜ್ಞಾನೈಶ್ವರ್ಯಗಳೇ ಮೊದಲಾದುವುಗಳಿಂದ ಇಂದ್ರನನ್ನು ಮೀರಿದವನು.

೧೫೮. **ಸಂಗ್ರಹಃ**—ಪ್ರಲಯಕಾಲದಲ್ಲಿ ಎಲ್ಲರನ್ನೂ ಸಂಹಾರಮಾಡುವವನು.

೧೫೯. **ಸರ್ಗಃ**—ಜಗದ್ರೂಪನು.

ಅಥವಾ ಜಗತ್ತಿಗೆ ಕಾರಣನಾದ್ದರಿಂದ ಭಗವಂತನಿಗೆ ಸರ್ಗ ಎಂದು ಹೆಸರು.

೧೬೦. **ಧೃತಾತ್ಮಾ**—ಜನ್ಮಾದಿರಹಿತನಾದ್ದರಿಂದ ತನ್ನ ಆತ್ಮವನ್ನು ಏಕರೂಪವಾಗಿ ಧರಿಸಿರುವವನು.

೧೬೧. **ನಿಯಮಃ**—ಪ್ರಜೆಗಳನ್ನು ತಮ್ಮ ತಮ್ಮ ಅಧಿಕಾರಗಳಲ್ಲಿ ನಿಯಮಿಸುವವನು.

೧೬೨. **ಯಮಃ**—ಅಂತರ್ಯಾಮಿಯಾಗಿರುವವನು.

೧೬೩. **ವೇದ್ಯಃ**—ನಿಃಶ್ರೇಯಸ್ಸನ್ನು ಇಚ್ಛಿಸುವವರಿಂದ ತಿಳಿಯಲ್ಪಡಲು ಯೋಗ್ಯನಾಗಿರುವವನು.

೧೬೪. **ವೈದ್ಯಃ**—ಸಕಲ ವಿದ್ಯೆಗಳನ್ನು ಬಲ್ಲವನು.

೧೬೫. **ಸದಾಯೋಗೀ**— ಯಾವಾಗಲೂ ಆವಿರ್ಭೂತವಾದ (ಪ್ರತ್ಯಕ್ಷವಾದ) ಸ್ವರೂಪವುಳ್ಳವನು.

೧೬೬. **ವೀರಹಾ**—ಧರ್ಮವನ್ನು ರಕ್ಷಿಸುವುದಕ್ಕೋಸ್ಕರ ವೀರರಾದ ಅಸುರರನ್ನು ಕೊಲ್ಲುವವನು.

೧೬೭. **ಮಾಧವಃ**—ವಿದ್ಯೆಗೆ ಸ್ವಾಮಿಯಾಗಿರುವವನು.

'ಮಾ ವಿದ್ಯಾ ಚ ಹರೇಃ ಪ್ರೋಕ್ತಾ....ಧವಃ ಸ್ವಾಮಿತಿ ಶಬ್ದಿತಃ' 'ಭಗವದ್ವಿದ್ಯೆಗೆ ಮಾ ಎಂದು ಹೇಳುತ್ತಾರೆ. ಧವ ಎಂದರೆ ಒಡೆಯ. ಎಲೈ ಭಗವಂತನೇ,

ನೀನು ಭಗವದ್-ವಿದ್ಯೆಗೆ ಒಡೆಯನಾದ್ದರಿಂದ ನಿನಗೆ ಮಾಧವ ಎಂದು ಹೆಸರು.' (ಹರಿ. ೩. ೮೮. ೪೯.)

೧೬೮. ಮಧುಃ—ಅತಿಶಯವಾದ ಪ್ರೇಮವನ್ನುಂಟುಮಾಡುವವನು.

ಹೇಗೆ ಜೇನು ಅಪಾರವಾದ ಪ್ರೀತಿಯನ್ನುಂಟುಮಾಡುವುದೋ ಹಾಗೆಯೇ ಭಗವಂತನು ಕೂಡ ಅತಿಶಯವಾದ ಪ್ರೇಮವನ್ನುಂಟುಮಾಡುವವನಾದ್ದರಿಂದ ಅವನಿಗೆ ಮಧು ಎಂದು ಹೆಸರು.

೧೬೯. ಅತೀಂದ್ರಿಯಃ—ಇಂದ್ರಿಯಗಳಿಗೆ ಅತೀತನಾಗಿರುವವನು.

ಭಗವಂತನು ಶಬ್ದಾದಿರಹಿತನಾದ್ದರಿಂದ ಇಂದ್ರಿಯಗಳಿಗೆ ವಿಷಯನಲ್ಲ; ಆದುದರಿಂದ ಅವನು ಅತೀಂದ್ರಿಯನು.

'ಅಶಬ್ದಮಸ್ಪರ್ಶಮ್' '(ಭಗವಂತನು) ಶಬ್ದರಹಿತನು ಸ್ಪರ್ಶರಹಿತನು' (ಕ. ಉ. ೧. ೩. ೧೫).

೧೭೦. ಮಹಾಮಾಯಃ— ಮಾಯಾವಿಗಳನ್ನೂ ಮಾಯೆಗೆ ಒಳಪಡಿಸುವವನು.

'ಮಮ ಮಾಯಾ ದುರತ್ಯಯಾ' 'ನನ್ನ ಮಾಯೆಯನ್ನು ದಾಟಲು ಕಷ್ಟಸಾಧ್ಯವು' (ಗೀತಾ ೭. ೧೪).

೧೭೧. ಮಹೋತ್ಸಾಹಃ— ಜಗತ್ತಿನ ಸೃಷ್ಟಿ-ಸ್ಥಿತಿ-ಲಯಕಾರ್ಯಗಳಲ್ಲಿ ಉದ್ಯುಕ್ತನಾಗಿರುವವನು.

೧೭೨. ಮಹಾಬಲಃ—ಬಲಿಷ್ಠರಿಗಿಂತ ಅಧಿಕವಾದ ಬಲವುಳ್ಳವನು.

೧೭೩. ಮಹಾಬುದ್ಧಿಃ—ಬುದ್ಧಿವಂತರಿಗಿಂತಲೂ ಅಧಿಕವಾದ ಬುದ್ಧಿಯುಳ್ಳವನು.

೧೭೪. ಮಹಾವೀರ್ಯಃ — ಮಹತ್ತಿನ (ಸೃಷ್ಟಿಯ) ಉತ್ಪತ್ತಿಗೆ ಕಾರಣವಾದ ಅವಿದ್ಯಾರೂಪವಾದ ವೀರ್ಯವುಳ್ಳವನು.

೧೭೫. ಮಹಾಶಕ್ತಿಃ—ಅಪರಿಮಿತವಾದ ಸಾಮರ್ಥ್ಯವುಳ್ಳವನು.

೧೭೬. ಮಹಾದ್ಯುತಿಃ—ಒಳಗೂ ಹೊರಗೂ ಅತಿಶಯವಾದ ತೇಜಸ್ಸುಳ್ಳವನು.

'ಸ್ವಯಂ ಜ್ಯೋತಿಃ ಭವತಿ' '(ಭಗವಂತನು) ಸ್ವಯಂ ಜ್ಯೋತಿಯು ಆಗಿರುತ್ತಾನೆ' (ಬೃ. ಉ. ೪. ೩. ೯). 'ಜ್ಯೋತಿಷಾಂ ಜ್ಯೋತಿಃ' '(ಭಗವಂತನು) ಜ್ಯೋತಿಗಳ ಜ್ಯೋತಿಯು' (ಬೃ. ಉ. ೪. ೪. ೧೬).

೧೭೭. ಅನಿರ್ದೇಶ್ಯವಪುಃ—ಅನಿರ್ದೇಶ್ಯವಾದ ಶರೀರವುಳ್ಳವನು.

ಬ್ರಹ್ಮವು ಸ್ವಸಂವೇದ್ಯವಾದ್ದರಿಂದ ಅದನ್ನು ಇದು ಅದು ಎಂದು ಬೇರೆಯವರಿಗೆ ನಿರ್ದೇಶಿಸಲು ಸಾಧ್ಯವಿಲ್ಲ. ಹೀಗೆ ನಿರ್ದೇಶಿಸಲು ಬಾರದ ಶರೀರವುಳ್ಳದ್ದಾದ್ದರಿಂದ ಬ್ರಹ್ಮವು ಅನಿರ್ದೇಶ್ಯವಪು ಎಂದು ಕರೆಯಲ್ಪಡುತ್ತದೆ.

೧೭೮. **ಶ್ರೀಮಾನ್** — ಸಕಲೈಶ್ವರ್ಯರೂಪವಾದ ಶ್ರೀಯಿಂದ ಒಡಗೂಡಿದವನು.

೧೭೯. **ಅಮೇಯಾತ್ಮಾ**—ಸಕಲಪ್ರಾಣಿಗಳಿಂದಲೂ ಅಳೆಯಲಾಗದ ಬುದ್ಧಿಯುಳ್ಳವನು.

೧೮೦. **ಮಹಾದ್ರಿಧೃಕ್** — ಗೋಸಂರಕ್ಷಣೆಗೋಸ್ಕರ ಗೋವರ್ಧನ ಪರ್ವತವನ್ನೂ, ಅಮೃತಮಥನಕಾಲದಲ್ಲಿ ಮಂದರಮಹಾಪರ್ವತವನ್ನೂ ಎತ್ತಿ ಹಿಡಿದವನು.

೧೮೧. **ಮಹೇಷ್ವಾಸಃ**—ಬಹಳ ದೊಡ್ಡದಾದ ಧನುಸ್ಸುಳ್ಳವನು.

೧೮೨. **ಮಹೀಭರ್ತಾ**–ಪ್ರಳಯಕಾಲದಲ್ಲಿ ಜಲರಾಶಿಯೊಳಗೆ ಮುಳುಗಿ ಹೋದ ಭೂದೇವಿಯನ್ನು (ಪೃಥ್ವಿಯನ್ನು) ಎತ್ತಿಹಿಡಿದವನು.

೧೮೩. **ಶ್ರೀನಿವಾಸಃ**—ಶ್ರೀನಿವಾಸನು.

ಅನಪಾಯಿನಿಯಾದ ಲಕ್ಷ್ಮಿಯು ವಿಷ್ಣುವಿನ ವಕ್ಷಃಸ್ಥಳದಲ್ಲಿ ವಾಸಿಸುತ್ತಿರುವಳಾದ್ದರಿಂದ ವಿಷ್ಣುವಿಗೆ ಶ್ರೀನಿವಾಸ ಎಂದು ಹೆಸರು.

೧೮೪. **ಸತಾಂ ಗತಿಃ**— ವೈದಿಕರಾದ ಸತ್ಪುರುಷರಿಗೆ ಪುರುಷಾರ್ಥಗಳನ್ನು ಸಾಧಿಸಲು ಹೇತುವಾಗಿರುವವನು.

೧೮೫. **ಅನಿರುದ್ಧಃ**—ತನ್ನ ಅವತಾರಗಳಲ್ಲಿ ಯಾರಿಂದಲೂ ನಿರೋಧಿಸಲ್ಪಡದೆ ಇರುವವನು.

೧೮೬. **ಸುರಾನಂದಃ**—ದೇವತೆಗಳನ್ನು ಆನಂದಗೊಳಿಸುವವನು.

೧೮೭. **ಗೋವಿಂದಃ**—ಗೋವಿಂದನು.

‘ನಷ್ಟಾಂ ವೈ ಧರಣೀಂ....ದೇವೈರ್ವಾಗ್ಭಿರಭಿಷ್ಟುತಃ’ ‘ಪೂರ್ವಕಾಲದಲ್ಲಿ ಗುಹೆಯನ್ನು ಸೇರಿ ನಷ್ಟಳಾದ ಭೂಮಿಯನ್ನು ನಾನು (ವಿಷ್ಣುವು) ಪಡೆದೆನು. ಆದುದರಿಂದ ನನ್ನನ್ನು ದೇವತೆಗಳೂ ವಾಕ್ಕುಗಳೂ ಗೋವಿಂದ ಎಂದು ಸ್ತುತಿಸಿದರು.’ (ಮಹಾ. ಶಾಂತಿ. ೩೪೨. ೭೦). ‘ಅಹಂ ಕಿಲೇಂದ್ರೋ ದೇವಾನಾಂ........ ಸ್ತೋಷ್ಯಂತಿ ಭುವಿ ಶಾಶ್ವತಮ್’ ‘ನಾನು ದೇವತೆಗಳಿಗೆ ಇಂದ್ರನು, ನೀನು (ಕೃಷ್ಣನು) ಗೋವುಗಳಿಗೆ ಇಂದ್ರನು. ಆದುದರಿಂದ ಭೂಲೋಕದಲ್ಲಿ ಜನರೆಲ್ಲರೂ ನಿನ್ನನ್ನು ಯಾವಾಗಲೂ ಗೋವಿಂದ ಎಂದು ಸ್ತುತಿಸುವರು’ (ಹರಿ. ೨. ೧೯. ೪೫). ‘ಗೌರೇಷಾ ತು ಯತೋ ವಾಣೀ . . . . ಮುನಿಭಿಃ ಕಥ್ಯತೇ ಭವಾನ್’ ‘ಗೋ

ಎಂದರೆ ವಾಣೀ. ಎಲೈ ದೇವನೇ, ನೀನು ವಾಣಿಯನ್ನು ಪಡೆಯುವಂತೆ ಮಾಡುವವನಾದ್ದರಿಂದ, ಮುನಿಗಳಿಂದ ಗೋವಿಂದ ಎಂದು ಕರೆಯಲ್ಪಡುತ್ತೀಯೆ.'

೧೮೮. ಗೋವಿದಾಂ ಪತಿಃ—ಗೋವಿದರಿಗೆ ಸ್ವಾಮಿಯಾಗಿರುವವನು.

ಗೋ ಎಂದರೆ ವಾಣೀ. ವಾಣಿಯನ್ನು ಅರಿತವನು ಗೋವಿದನು. ಭಗವಂತನು ಗೋವಿದರಲ್ಲಿ ವಿಶಿಷ್ಟನಾದುದರಿಂದ ಅವರಿಗೆ ಸ್ವಾಮಿಯಾಗಿರುವನು.

೧೮೯. ಮರೀಚಿಃ—ತೇಜಸ್ವಿಗಳಲ್ಲಿ ತೇಜಸ್ಸಾಗಿರುವವನು.

'ತೇಜಸ್ತೇಜಸ್ವಿನಾಮಹಮ್' 'ನಾನು ತೇಜಸ್ವಿಗಳಲ್ಲಿ ತೇಜಸ್ಸಾಗಿದ್ದೇನೆ.' (ಗೀತಾ. ೧೦. ೩೬).

೧೯೦. ದಮನಃ—ದಮನಮಾಡುವವನು.

ಭಗವಂತನು ತಮ್ಮ ತಮ್ಮ ಅಧಿಕಾರಗಳಿಂದ ಭ್ರಷ್ಟರಾಗುವ ಪ್ರಜೆಗಳನ್ನು ವೈವಸ್ವತ(ಯಮ)ಮೊದಲಾದವರ ರೂಪದಿಂದ ದಮನಮಾಡುತ್ತಾನೆ. ಆದುದರಿಂದ ಅವನಿಗೆ ದಮನ ಎಂದು ಹೆಸರು.

೧೯೧. ಹಂಸಃ—ಸಂಸಾರಭಯವನ್ನು ನಾಶಮಾಡುವವನು.

'ನಾನು ಅವನೇ ಆಗಿದ್ದೇನೆ' ಎಂಬ ತಾದಾತ್ಮ್ಯಭಾವನೆಯಿಂದ ತನ್ನನ್ನು ಧ್ಯಾನಿಸುವವರ ಸಂಸಾರಭಯವನ್ನು ಭಗವಂತನು ನಾಶಮಾಡುತ್ತಾನೆ. ಆದುದರಿಂದ ಭಗವಂತನಿಗೆ ಹಂಸ ಎಂದು ಹೆಸರು. ಅಥವಾ ಸಮಸ್ತಶರೀರಗಳಲ್ಲಿ ಹೋಗುವವನಾದ್ದರಿಂದ ಭಗವಂತನಿಗೆ ಹಂಸ ಎಂದು ಹೆಸರು.

೧೯೨. ಸುಪರ್ಣಃ—ಸುಂದರವಾದ ಧರ್ಮಾಧರ್ಮರೂಪವಾದ ರೆಕ್ಕೆಗಳುಳ್ಳವನು.

ಅಥವಾ ಸುಪರ್ಣ ಎಂದರೆ ಸುಂದರವಾದ ರೆಕ್ಕೆಗಳುಳ್ಳ ಗರುಡನು.

'ಸುಪರ್ಣಃ ಪತತಾಮಸ್ಮಿ' 'ಪಕ್ಷಿಗಳಲ್ಲಿ ನಾನು ಗರುಡನು' (ಭಗವದ್ವಚನ).

೧೯೩. ಭುಜಗೋತ್ತಮಃ—ಸರ್ಪಗಳಲ್ಲಿ ಉತ್ತಮನಾಗಿರುವವನು.

ಭುಜದಿಂದ ಚಲಿಸುವವರಲ್ಲಿ ಎಂದರೆ ಸರ್ಪಗಳಲ್ಲಿ ಉತ್ತಮನಾಗಿರುವವನು ಭುಜಗೋತ್ತಮನು. ಶೇಷ, ವಾಸುಕಿ ಮೊದಲಾದ ಉತ್ತಮವರ್ಗದ ಸರ್ಪಗಳು ಭಗವಂತನ ವಿಭೂತಿಗಳಾದ್ದರಿಂದ ಭಗವಂತನಿಗೂ ಭುಜಗೋತ್ತಮ ಎಂದು ಹೆಸರು.

೧೯೪. ಹಿರಣ್ಯನಾಭಃ—ಬಂಗಾರದಂತೆ ಕಲ್ಯಾಣಮಯಿಯಾದ ನಾಭಿಯುಳ್ಳವನು.

ಅಥವಾ ಕಲ್ಯಾಣವನ್ನುಂಟುಮಾಡುವ ರಮಣೀಯವಾದ ನಾಭಿಯುಳ್ಳವನು.

೧೯೫. ಸುತಪಾಃ—(ಬದರಿಕಾಶ್ರಮದಲ್ಲಿ ನರನಾರಾಯಣರೂಪದಿಂದ) ಮಂಗಳಕರವಾದ ತಪಸ್ಸನ್ನು ಆಚರಿಸುವವನು.

೧೯೬. **ಪದ್ಮನಾಭಃ**—ತಾವರೆಯಂತೆ ಸುಂದರವಾದ ವರ್ತುಲಾಕಾರದ ನಾಭಿಯುಳ್ಳವನು.

ಅಥವಾ ಹೃದಯಕಮಲದ ಮಧ್ಯದಲ್ಲಿ ಪ್ರಕಾಶಿಸುವವನು.

೧೯೭. **ಪ್ರಜಾಪತಿಃ**—ಪ್ರಜೆಗಳೆಲ್ಲರಿಗೂ ಪಿತನಾಗಿರುವವನು.

೧೯೮. **ಅಮೃತ್ಯುಃ**—ವಿನಾಶವಾಗಲಿ ವಿನಾಶಹೊಂದಲು ಹೇತುವಾಗಲಿ ಇಲ್ಲದವನು.

೧೯೯. **ಸರ್ವದೃಕ್**—ತನ್ನ ಸ್ವಾಭಾವಿಕಜ್ಞಾನದಿಂದ ಪ್ರಾಣಿಗಳ ಕೃತಾಕೃತಕರ್ಮಗಳೆಲ್ಲವನ್ನೂ ನೋಡುವವನು.

೨೦೦. **ಸಿಂಹಃ**—ನಾಶಮಾಡುವವನು, ಕೊಲ್ಲುವವನು.

೨೦೧. **ಸಂಧಾತಾ**—ಪುರುಷರನ್ನು ಅವರವರ ಕರ್ಮಫಲಗಳೊಂದಿಗೆ ಕೂಡಿಸುವವನು.

೨೦೨. **ಸಂಧಿಮಾನ್**—ಫಲಗಳನ್ನು ಭೋಗಿಸುವವನು.

ಭಗವಂತನೇ ಫಲಗಳನ್ನು ಭೋಗಿಸುವವನಾದ್ದರಿಂದ ಅವನಿಗೆ ಸಂಧಿಮಾನ್ ಎಂದು ಹೆಸರು.

೨೦೩. **ಸ್ಥಿರಃ**—ಯಾವಾಗಲೂ ಏಕರೂಪವಾಗಿರುವವನು.

೨೦೪. **ಅಜಃ**—ಹೋಗುವವನು ಅಥವಾ ಬಿಸಾಡುವವನು.

ಭಗವಂತನು ಭಕ್ತರ ಹೃದಯಗಳಲ್ಲಿ ಹೋಗುತ್ತಾನೆ ಮತ್ತು ದುಷ್ಟರನ್ನು ಬಿಸಾಡುತ್ತಾನೆ (ನಾಶಮಾಡುತ್ತಾನೆ).

೨೦೫. **ದುರ್ಮರ್ಷಣಃ**—ಸೋಲಿಸಲು ಅಸಾಧ್ಯನಾಗಿರುವವನು.

ಭಗವಂತನನ್ನು ತಡೆದುಕೊಳ್ಳಲು ಅಥವಾ ಸೋಲಿಸಲು ದಾನವಾದಿಗಳಿಗೆ ಸಾಧ್ಯವಿಲ್ಲವಾದ್ದರಿಂದ ಭಗವಂತನು ದುರ್ಮರ್ಷಣನು.

೨೦೬. **ಶಾಸ್ತಾ**—ಶ್ರುತಿ, ಸ್ಮೃತಿ ಮೊದಲಾದುವುಗಳ ಮೂಲಕ ಎಲ್ಲರಿಗೂ ಉಪದೇಶಮಾಡುವವನು, ಅನುಶಾಸನಮಾಡುವವನು.

೨೦೭. **ವಿಶ್ರುತಾತ್ಮಾ**—ಆತ್ಮನನ್ನು ವಿಶೇಷವಾಗಿ ಅರಿತಿರುವವನು.

ಸತ್ಯಜ್ಞಾನಾದಿರೂಪನಾದ ಆತ್ಮನನ್ನು ಭಗವಂತನು ವಿಶೇಷವಾಗಿ ಅರಿತಿರುವವನಾದ್ದರಿಂದ ಭಗವಂತನಿಗೆ ವಿಶ್ರುತಾತ್ಮಾ ಎಂದು ಹೆಸರು.

೨೦೮. **ಸುರಾರಿಹಾ**—ದೇವತೆಗಳ ಶತ್ರುಗಳನ್ನೆಲ್ಲ ಸಂಹಾರಮಾಡುವವನು.

೨೦೯. **ಗುರುಃ**—ಸಮಸ್ತ ವಿದ್ಯೆಗಳ ಉಪದೇಶಕನು.

ಅಥವಾ ಸರ್ವರಿಗೂ ಜನಕನಾದ್ದರಿಂದ ಭಗವಂತನು ಗುರುವು.

೨೧೦. **ಗುರುತಮಃ**—ಬ್ರಹ್ಮಾದಿಗಳಿಗೂ ಬ್ರಹ್ಮವಿದ್ಯೆಯನ್ನು ಪ್ರದಾನ ಮಾಡಿದವನು.

'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' 'ಯಾವನು ಮೊದಲು ಬ್ರಹ್ಮನನ್ನು ಸೃಷ್ಟಿಸಿದನೋ ಮತ್ತು ಅವನಿಗೆ ವೇದಗಳನ್ನು ಉಪದೇಶಿಸಿದನೋ' (ಶ್ವೇ. ಉ. ೬. ೧೮).

೨೧೧. **ಧಾಮ**—ಜ್ಯೋತಿಯಾಗಿರುವವನು.

ಅಥವಾ ಭಗವಂತನು ಸರ್ವಕಾಮಗಳಿಗೆ (ಆಶೆಗಳಿಗೆ) ಆಸ್ಪದವಾಗಿರುವನಾದ್ದರಿಂದ ಅವನಿಗೆ ಧಾಮ ಎಂದು ಹೆಸರು.

'ನಾರಾಯಣಃ ಪರೋ ಜ್ಯೋತಿಃ' 'ನಾರಾಯಣನು ಪರಮಶ್ರೇಷ್ಠ ಜ್ಯೋತಿಯು (ಆಗಿರುವನು)' (ನಾ. ಉ. ೧೩. ೧೧). 'ಪರಮಂ ಬ್ರಹ್ಮ ಧಾಮ' 'ಬ್ರಹ್ಮವು ಪರಮವಾದ ಧಾಮವು' (ಮುಂ. ಉ. ೩. ೨. ೧).

೨೧೨. **ಸತ್ಯಃ**—ಸತ್ಯವಚನರೂಪವಾದ ಧರ್ಮವಾಗಿರುವವನು.

ಅಥವಾ ಭಗವಂತನು ಸತ್ಯದ ಸತ್ಯವಾಗಿರುವನಾದ್ದರಿಂದ ಅವನಿಗೆ ಸತ್ಯ ಎಂದು ಹೆಸರು.

'ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್' 'ಪ್ರಾಣಗಳೇ ಸತ್ಯವಾಗಿರುವುವು. ಈತನು (ಪರಮಾತ್ಮನು) ಸತ್ಯವಾಗಿರುವ ಪ್ರಾಣಗಳ ಸತ್ಯವಾಗಿರುವನು.' (ಬೃ. ಉ. ೨. ೩. ೬).

೨೧೩. **ಸತ್ಯಪರಾಕ್ರಮಃ**—ಸತ್ಯವಾಗಿರುವ ಪರಾಕ್ರಮವುಳ್ಳವನು.

೨೧೪. **ನಿಮಿಷಃ**—ಮುಚ್ಚಿಕೊಂಡಿರುವ ಕಣ್ಣುಗಳುಳ್ಳವನು.

ಯೋಗನಿದ್ರಾರತನಾದ ಭಗವಂತನ ಕಣ್ಣುಗಳು ಮುಚ್ಚಿಕೊಂಡಿರುವುವಾದ್ದರಿಂದ ಅವನಿಗೆ ನಿಮಿಷ ಎಂದು ಹೆಸರು.

೨೧೫. **ಅನಿಮಿಷಃ**—ನಿತ್ಯಪ್ರಬುದ್ಧಸ್ವರೂಪನು.

ಅಥವಾ ಭಗವಂತನು ಮತ್ಸ್ಯರೂಪದಿಂದ ಅಥವಾ ಆತ್ಮರೂಪದಿಂದ ಯಾವಾಗಲೂ ಜಾಗ್ರತನಾಗಿರುವನಾದ್ದರಿಂದ ಅನಿಮಿಷನು.

೨೧೬. **ಸ್ರಗ್ವೀ**—ಪಂಚಭೂತತನ್ಮಾತ್ರರೂಪವಾದ ವೈಜಯಂತೀ ಎಂಬ ಹೆಸರಿನ ಮಾಲೆಯನ್ನು ನಿತ್ಯವೂ ಧರಿಸಿರುವವನು.

೨೧೭. **ವಾಚಸ್ಪತಿರುದಾರಧೀಃ**—ವಾಚಸ್ಪತಿಯೂ ಉದಾರಧೀಯೂ ಆಗಿರುವವನು.

ಭಗವಂತನು ವಿದ್ಯೆಗೆ ಅಧಿಪತಿಯಾದ್ದರಿಂದ ವಾಚಸ್ಪತಿಯೂ, ಸರ್ವಪದಾರ್ಥಗಳನ್ನು ವಿಷಯೀಕರಿಸಿಕೊಳ್ಳುವ ಬುದ್ಧಿಯುಳ್ಳವನಾದ್ದರಿಂದ ಉದಾರಧೀಯೂ ಆಗಿರುವನು. ಆದುದರಿಂದ ಅವನಿಗೆ ವಾಚಸ್ಪತಿರುದಾರಧೀ ಎಂದು ಹೆಸರು.

೨೧೮. ಅಗ್ರಣೀಃ— ಮುಮುಕ್ಷುಗಳನ್ನು ಪ್ರಕೃಷ್ಟವಾದ ಪದವಿಗೆ (ಎಂದರೆ ಮೋಕ್ಷಕ್ಕೆ) ಒಯ್ಯುವವನು.

೨೧೯. ಗ್ರಾಮಣೀಃ—ಭೂತಸಮೂಹಕ್ಕೆಲ್ಲ ನಾಯಕನಾಗಿರುವವನು.

೨೨೦. ಶ್ರೀಮಾನ್—ಸರ್ವಾತಿಶಯವಾದ ಕಾಂತಿಯುಳ್ಳವನು.

೨೨೧. ನ್ಯಾಯಃ—ಪ್ರಮಾಣಗಳಿಗೆಲ್ಲ ಆಶ್ರಯನಾಗಿರುವವನು.

ಪ್ರಮಾಣಗಳನ್ನು ಅನುಗ್ರಹಿಸುವ, ಪ್ರಮಾಣಗಳಲ್ಲಿ ಅಭೇದವನ್ನುಂಟು ಮಾಡುವ ತರ್ಕವೇ ನ್ಯಾಯ. ಭಗವಂತನು ಪ್ರಮಾಣಗಳಿಗೆಲ್ಲ ಆಶ್ರಯಭೂತನಾದ್ದರಿಂದ ಅವನಿಗೂ ನ್ಯಾಯ ಎಂದು ಹೆಸರು.

೨೨೨. ನೇತಾ—ಜಗದ್ರೂಪವಾದ ಯಂತ್ರವನ್ನು ನಡಸುವವನು.

೨೨೩. ಸಮೀರಣಃ—ವಾಯುರೂಪದಿಂದ ಭೂತಗಳನ್ನು ಕಾರ್ಯಶೀಲರನ್ನಾಗಿ ಮಾಡುವವನು.

೨೨೪. ಸಹಸ್ರಮೂರ್ಧಾ—ಸಹಸ್ರ ಶಿರಸ್ಸುಗಳುಳ್ಳವನು.

೨೨೫. ವಿಶ್ವಾತ್ಮಾ—ವಿಶ್ವದ ಆತ್ಮವಾಗಿರುವವನು.

೨೨೬. ಸಹಸ್ರಾಕ್ಷಃ—ಸಹಸ್ರಕಣ್ಣುಗಳುಳ್ಳವನು.

ಅಥವಾ ಸಹಸ್ರ ಇಂದ್ರಿಯಗಳುಳ್ಳವನು.

೨೨೭. ಸಹಸ್ರಪಾತ್—ಸಹಸ್ರಪಾದಗಳುಳ್ಳವನು.

'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' 'ಪುರುಷನು ಸಹಸ್ರ ಶಿರಸ್ಸುಗಳುಳ್ಳವನು, ಸಹಸ್ರಕಣ್ಣುಗಳುಳ್ಳವನು, ಸಹಸ್ರಪಾದಗಳುಳ್ಳವನು' (ಪು. ಸೂ. ೧).

೨೨೮. ಆವರ್ತನಃ—ಸಂಸಾರಚಕ್ರವನ್ನು ತಿರುಗಿಸುತ್ತಿರುವವನು.

ಸಂಸಾರಚಕ್ರವನ್ನು ತಿರುಗಿಸುತ್ತಿರುವುದು ಭಗವಂತನ ಸ್ವಭಾವವಾದ್ದರಿಂದ ಅವನಿಗೆ ಆವರ್ತನ ಎಂದು ಹೆಸರು.

೨೨೯. ನಿವೃತ್ತಾತ್ಮಾ — ಸಂಸಾರಸಂಬಂಧದಿಂದ ನಿವೃತ್ತಿಹೊಂದಿದ ಸ್ವರೂಪವುಳ್ಳವನು.

೨೩೦. ಸಂವೃತಃ—ಆಚ್ಛಾದಿಸುವ (ಮುಚ್ಚುವ) ಸ್ವಭಾವವುಳ್ಳ ಅವಿದ್ಯೆಯಿಂದ ಮುಚ್ಚಲ್ಪಟ್ಟಿರುವವನು.

೨೩೧. ಸಂಪ್ರಮರ್ದನಃ—ರುದ್ರ ಮತ್ತು ಕಾಲ ಮೊದಲಾದ ವಿಭೂತಿಗಳಿಂದ ಎಲ್ಲವನ್ನೂ ಸಂಪೂರ್ಣವಾಗಿ ನಾಶಮಾಡುವವನು.

೨೩೨. ಅಹಃ ಸಂವರ್ತಕಃ—ಸೂರ್ಯರೂಪದಿಂದ ಸಮ್ಯಕ್ ರೀತಿಯಲ್ಲಿ ದಿನವನ್ನು ಪ್ರವರ್ತಿಸುವವನು.

೨೩೩. ವಹ್ನಿಃ—ಹವಿಸ್ಸನ್ನು ವಹಿಸುವವನು, ಹವಿಸ್ಸನ್ನು ದೇವತೆಗಳಿಗೆ ಮುಟ್ಟಿಸುವವನು.

೨೩೪. ಅನಿಲಃ—ಒಂದು ನಿವಾಸಸ್ಥಾನವೆಂಬುದು ಇಲ್ಲದವನು.

ಅಥವಾ ಭಗವಂತನು ಅನಾದಿಯಾಗಿರುವನಾದ್ದರಿಂದ ಅನಿಲನು.

೨೩೫. ಧರಣೀಧರಃ—ಶೇಷದಿಗ್ಗಜಗಳು ಮೊದಲಾದವರ ರೂಪದಿಂದ ಮತ್ತು ವರಾಹರೂಪದಿಂದ ಪೃಥ್ವಿಯನ್ನು ಎತ್ತಿಹಿಡಿದಿರುವವನು.

೨೩೬. ಸುಪ್ರಸಾದಃ—ಉತ್ಕೃಷ್ಟವಾದ ಪ್ರಸಾದವುಳ್ಳವನು.

ತನಗೆ ಅಪಕಾರವನ್ನು ಮಾಡಿದ ಶಿಶುಪಾಲ ಮೊದಲಾದವರಿಗೂ ಮೋಕ್ಷವನ್ನು ಕೊಟ್ಟವನಾದ್ದರಿಂದ ಭಗವಂತನು ಉತ್ಕೃಷ್ಟವಾದ ಪ್ರಸಾದವುಳ್ಳವನು. ಆದುದರಿಂದ ಅವನಿಗೆ ಸುಪ್ರಸಾದ ಎಂದು ಹೆಸರು.

೨೩೭. ಪ್ರಸನ್ನಾತ್ಮಾ—ರಜಸ್ತಮೋಗುಣಗಳಿಂದ ಕಲುಷಿತವಾಗದ ಅಂತಃಕರಣವುಳ್ಳವನು.

ಅಥವಾ ಕರುಣಾರ್ದ್ರಸ್ವಭಾವವುಳ್ಳವನು ಅಥವಾ ಸರ್ವಾಭೀಷ್ಟಗಳನ್ನು ಹೊಂದಿದವನು.

೨೩೮. ವಿಶ್ವಧೃಕ್—ವಿಶ್ವವನ್ನು ಎತ್ತಿಹಿಡಿದಿರುವವನು.

ಅಥವಾ ವಿಶ್ವಕ್ಕೆ ಆಧಾರವಾಗಿರುವವನು.

೨೩೯. ವಿಶ್ವಭುಕ್—ವಿಶ್ವವನ್ನು ಭೋಗಿಸುವವನು ಅಥವಾ ಪಾಲಿಸುವವನು.

೨೪೦. ವಿಭುಃ—ಹಿರಣ್ಯಗರ್ಭಾದಿರೂಪದಿಂದ ವಿವಿಧನಾಗುವವನು.

'ನಿತ್ಯಂ ವಿಭುಮ್' '(ಭಗವಂತನು) ನಿತ್ಯನು, ವಿಭುವು' (ಮುಂ.ಉ. ೧.೬).

೨೪೧. ಸತ್ಕರ್ತಾ—ಪೂಜ್ಯರನ್ನು ಸತ್ಕರಿಸುವವನು, ಪೂಜಿಸುವವನು.

೨೪೨. ಸತ್ಕೃತಃ—ಪೂಜಿತರಿಂದಲೂ ಪೂಜಿಸಲ್ಪಡುವವನು.

೨೪೩. ಸಾಧುಃ—ನ್ಯಾಯಪ್ರವೃತ್ತಿಯುಳ್ಳವನು.

೨೪೪. ಜಹ್ನುಃ—ಸಂಹಾರಸಮಯದಲ್ಲಿ ಜನರನ್ನೆಲ್ಲ ನಾಶಮಾಡುವವನು.

ಅಥವಾ ಅಜ್ಞಾನಿಗಳನ್ನು ತ್ಯಜಿಸಿ ಭಕ್ತರನ್ನು ಪರಮಪದಕ್ಕೆ (ಮೋಕ್ಷಕ್ಕೆ) ಒಯ್ಯುವವನು.

೨೪೫. ನಾರಾಯಣಃ—ನಾರಾಯಣನು.

ನರ ಎಂದರೆ ಆತ್ಮನು. ಆದರಿಂದ ಹುಟ್ಟಿದ ಆಕಾಶಾದಿಕಾರ್ಯಗಳಿಗೆ 'ನಾರ' ಎಂದು ಹೇಳುತ್ತಾರೆ. ಆತ್ಮನು ಅವುಗಳನ್ನು ಕಾರಣರೂಪದಿಂದ ವ್ಯಾಪಿಸಿರುವ

ನಾದ್ದರಿಂದ ಅವು ಆತ್ಮನ ವಾಸಸ್ಥಾನವಾಗಿ ಇವೆ. ಆದುದರಿಂದ ಭಗವಂತನಿಗೆ ನಾರಾಯಣ ಎಂದು ಹೆಸರು. ಅಥವಾ ಭಗವಂತನು ಪ್ರಲಯಕಾಲದಲ್ಲಿ ಎಲ್ಲ 'ನಾರ'ಗಳ ಎಂದರೆ ಜೀವರುಗಳ ಆಶ್ರಯಸ್ಥಾನವಾಗುವನಾದ್ದರಿಂದ ನಾರಾಯಣ ಎಂದು ಅವನಿಗೆ ಹೆಸರು.

'ಯಚ್ಚ ಕಿಂಚಿಜ್ಜಗತ್ಸರ್ವಂ........ವ್ಯಾಪ್ಯ ನಾರಾಯಣಃ ಸ್ಥಿತಃ' 'ಇಡೀ ಜಗತ್ತನ್ನು—ಜಗತ್ತಿನಲ್ಲಿ ನಾವು ಏನೆಲ್ಲವನ್ನು ನೋಡುತ್ತೇವೋ ಮತ್ತು ಏನೆಲ್ಲವನ್ನು ಕೇಳುತ್ತೇವೋ ಅದೆಲ್ಲವನ್ನು—ಒಳಗೂ ಹೊರಗೂ ನಾರಾಯಣನು ವ್ಯಾಪಿಸಿರುತ್ತಾನೆ' (ನಾ. ಉ. ೧೩. ೫).

**೨೪೬. ನರಃ**—ಭಕ್ತರನ್ನು ಮೋಕ್ಷಕ್ಕೆ ಒಯ್ಯುವವನು.

'ನಯತೀತಿ ನರಃ ಪ್ರೋಕ್ತಃ ಪರಮಾತ್ಮಾ ಸನಾತನಃ' '(ಭಕ್ತರನ್ನು ಮೋಕ್ಷಕ್ಕೆ) ಒಯ್ಯುವವನಾದ್ದರಿಂದ ಸನಾತನನಾದ ಪರಮಾತ್ಮನು ನರ ಎಂದು ಕರೆಯಲ್ಪಡುತ್ತಾನೆ' (ವ್ಯಾಸವಚನ).

**೨೪೭. ಅಸಂಖ್ಯೇಯಃ**—ನಾಮರೂಪಭೇದಾದಿಗಳಿಲ್ಲದವನು.

ಭಗವಂತನಲ್ಲಿ ಸಂಖ್ಯೆ ಎಂದರೆ ನಾಮರೂಪಭೇದಾದಿಗಳು ಇಲ್ಲವಾದ್ದರಿಂದ ಅವನು ಅಸಂಖ್ಯೇಯನು.

**೨೪೮. ಅಪ್ರಮೇಯಾತ್ಮಾ**—ಅಳೆಯಲಾಗದ ಸ್ವರೂಪವುಳ್ಳವನು.

**೨೪೯. ವಿಶಿಷ್ಟಃ**—ಸರ್ವಾತಿಶಯನಾಗಿರುವವನು.

**೨೫೦. ಶಿಷ್ಟಕೃತ್**—ಶಾಸನವನ್ನು ಮಾಡುವವನು ಅಥವಾ ಶಿಷ್ಟರನ್ನು (ಸತ್ಪುರುಷರನ್ನು) ಪಾಲಿಸುವವನು.

**೨೫೧. ಶುಚಿಃ**—ನಿರಂಜನನು.

**೨೫೨. ಸಿದ್ಧಾರ್ಥಃ**—ಇಷ್ಟಾರ್ಥಗಳನ್ನೆಲ್ಲ ಹೊಂದಿದವನು.

**೨೫೩. ಸಿದ್ಧಸಂಕಲ್ಪಃ**—ಈಡೇರಿದ ಸಂಕಲ್ಪಗಳುಳ್ಳವನು.

'ಸತ್ಯಸಂಕಲ್ಪಃ' '(ಆತ್ಮನು) ಸತ್ಯಸಂಕಲ್ಪನು' (ಛಾ. ಉ. ೮. ೭. ೧).

**೨೫೪. ಸಿದ್ಧಿದಃ**—ಕರ್ತೃಗಳಿಗೆ ಅವರವರ ಅಧಿಕಾರಾನುರೂಪವಾದ ಫಲಗಳನ್ನು ಕೊಡುವವನು.

**೨೫೫. ಸಿದ್ಧಿಸಾಧನಃ**—ಸಿದ್ಧಿಯನ್ನು (ಕ್ರಿಯೆಯನ್ನು) ಸಾಧಿಸುವವನು.

**೨೫೬. ವೃಷಾಹೀ**—ಧರ್ಮರೂಪವಾದ ಯಜ್ಞಕ್ಕೆ ನೆಲೆಯಾಗಿರುವವನು.

ವೃಷ ಎಂದರೆ ಧರ್ಮ ಅಥವಾ ಪುಣ್ಯ. ಅದು ಹಗಲಿನಂತೆ (ಅಹ) ಪ್ರಕಾಶಮಾನವಾಗಿರುವುದರಿಂದ ಅಹ ಎಂದು ಕರೆಯಲ್ಪಡುತ್ತದೆ (ವೃಷಾಹ). ದ್ವಾದಶಾಹ (ಹದಿನೆರಡು ದಿನಗಳವರೆಗೆ ನಡೆಯುವ ಯಜ್ಞ) ಮೊದಲಾದ ಯಜ್ಞಗಳನ್ನು

ವೃಷಾಹ ಎಂದು ಹೇಳುತ್ತಾರೆ. ವೃಷಾಹವು ಭಗವಂತನಲ್ಲಿ ಅವಸ್ಥಿತವಾಗಿರುವುದರಿಂದ ಭಗವಂತನಿಗೆ ವೃಷಾಹೀ ಎಂದು ಹೆಸರು.

**೨೫೭. ವೃಷಭಃ** — ಭಕ್ತರಿಗೆ ಇಷ್ಟಾರ್ಥಗಳನ್ನು ವರ್ಷಿಸುವವನು (ಕೊಡುವವನು).

**೨೫೮. ವಿಷ್ಣುಃ**—ಇಡೀ ವಿಶ್ವವನ್ನು ವ್ಯಾಪಿಸಿರುವವನು.

'ವಿಷ್ಣುರ್ವಿಕ್ರಮಣಾತ್' (ಇಡೀ ವಿಶ್ವವನ್ನು) ಹೆಜ್ಜೆಗಳಿಂದ ಅಳೆದವನಾದ್ದರಿಂದ (ಭಗವಂತನು) ವಿಷ್ಣುವು (ಮಹಾ. ಉದ್ಯೋಗ. ೭೦. ೧೩).

**೨೫೯. ವೃಷಪರ್ವಾ**— ಧರ್ಮರೂಪವಾದ ಸೋಪಾನಪಂಕ್ತಿಗಳುಳ್ಳವನು.

ಭಗವಂತನ ಪರಂಧಾಮವನ್ನು ಸೇರಲಿಚ್ಛಿಸುವವರಿಗೆ ಧರ್ಮರೂಪವಾದ ಸೋಪಾನಪಂಕ್ತಿಗಳು ಹೇಳಲ್ಪಟ್ಟವೆ. ಆದುದರಿಂದ ಭಗವಂತನಿಗೆ ವೃಷಪರ್ವಾ ಎಂದು ಹೆಸರು.

**೨೬೦. ವೃಷೋದರಃ**—ಪ್ರಜೆಗಳನ್ನು ವರ್ಷಿಸುವಂತಿರುವ ಹೊಟ್ಟೆಯುಳ್ಳವನು.

**೨೬೧. ವರ್ಧನಃ**—ವೃದ್ಧಿಗೊಳಿಸುವವನು.

**೨೬೨. ವರ್ಧಮಾನಃ**—ಪ್ರಪಂಚರೂಪದಿಂದ ವೃದ್ಧಿಯಾಗುವವನು.

**೨೬೩. ವಿವಿಕ್ತಃ**—ಪ್ರಪಂಚದಿಂದ ಪ್ರತ್ಯೇಕವಾಗಿರುವವನು.

ಭಗವಂತನು ಈ ಪ್ರಕಾರ (ಎಂದರೆ ಪ್ರಪಂಚರೂಪದಿಂದ) ವೃದ್ಧಿಯಾಗುವವನಾದರೂ (ಪ್ರಪಂಚದಿಂದ) ಪ್ರತ್ಯೇಕವಾಗಿ ಇರುತ್ತಾನೆ. ಆದುದರಿಂದ ಅವನಿಗೆ ವಿವಿಕ್ತ ಎಂದು ಹೆಸರು.

**೨೬೪. ಶ್ರುತಿಸಾಗರಃ**—ಶ್ರುತಿಗಳಿಗೆ ಆಶ್ರಯಸ್ಥಾನವಾಗಿರುವವನು.

ನೀರು ಸಾಗರವನ್ನು ಆಶ್ರಯಿಸುವಂತೆ ಶ್ರುತಿಗಳೆಲ್ಲ ಭಗವಂತನನ್ನು ಆಶ್ರಯಿಸುತ್ತವೆ; ಆದುದರಿಂದ ಭಗವಂತನು ಶ್ರುತಿಸಾಗರನು.

**೨೬೫. ಸುಭುಜಃ**—ಜಗದ್ರಕ್ಷಣೆಯನ್ನು ಮಾಡುವ ಸುಂದರವಾದ ಬಾಹುಗಳುಳ್ಳವನು.

**೨೬೬. ದುರ್ಧರಃ** — ಇತರರಿಂದ ಧಾರಣಮಾಡಲ್ಪಡಲು ಅಸಾಧ್ಯನಾಗಿರುವವನು.

ಇತರರಿಂದ ಎತ್ತಿಹಿಡಿಯಲ್ಪಡಲು ಅಶಕ್ಯವಾಗಿರುವ ಪೃಥಿವ್ಯಾದಿ ಲೋಕಧಾರಕವಸ್ತುಗಳಿಗೂ ಆಧಾರವಾಗಿರುವವನು ಮತ್ತು ಇತರ ಯಾರಿಂದಲೂ ಎತ್ತಿಹಿಡಿಯಲ್ಪಡಲು ಅಸಾಧ್ಯವಾಗಿರುವವನು. ಅಥವಾ ಧ್ಯಾನಸಮಯದಲ್ಲಿ

ಮುಮುಕ್ಷುಗಳಿಂದ ತಮ್ಮ ಹೃದಯದಲ್ಲಿ ಬಹಳ ಕಷ್ಟದಿಂದ ಧಾರಣಮಾಡಲ್ಪಡು ವವನು.

**೨೧೭. ವಾಗ್ಮೀ**—ವಾಗ್ಮಿಯು.

ಭಗವಂತನಿಂದ ಬ್ರಹ್ಮಮಯಿಯಾದ ವಾಕ್ (ವಾಣಿಯು) ಪ್ರಾದುರ್ಭವಿಸಿ ದಳು. ಆದುದರಿಂದ ಭಗವಂತನಿಗೆ ವಾಗ್ಮೀ ಎಂದು ಹೆಸರು.

**೨೧೮. ಮಹೇಂದ್ರಃ**—ಈಶ್ವರರಿಗೂ ಈಶ್ವರನಾಗಿರುವವನು.

**೨೧೯. ವಸುದಃ**—ಧನವನ್ನು ಕೊಡುವವನು.

'ಅನ್ನಾದೋ ವಸುದಾನಃ' '(ಭಗವಂತನು) ಅನ್ನವನ್ನು ಭುಂಜಿಸುವವನು. ಮತ್ತು (ಕರ್ಮಫಲವೆಂಬ) ಧನವನ್ನು ಕೊಡುವವನು' (ಬೃ. ಉ. ೪. ೪. ೨೪).

**೨೨೦. ವಸುಃ**— ಧನವಾಗಿರುವವನು.

ಭಗವಂತನು ಕೊಡುವ ಧನವು ಭಗವಂತನೇ ಆಗಿರುವುದು. ಆದುದರಿಂದ ಭಗವಂತನಿಗೆ ವಸು ಎಂದು ಹೆಸರು. ಅಥವಾ ಭಗವಂತನು ತನ್ನ ಸ್ವರೂಪವನ್ನು ಮಾಯೆಯಿಂದ ಮುಚ್ಚಿಕೊಂಡಿರುವನಾದ್ದರಿಂದ ಅವನಿಗೆ ವಸು ಎಂದು ಹೆಸರು.

**೨೨೧. ನೈಕರೂಪಃ**—ಒಂದೇ ರೂಪವಿಲ್ಲದವನು.

ಭಗವಂತನು ಅನೇಕರೂಪಗಳುಳ್ಳವನಾದ್ದರಿಂದ ನೈಕಸ್ವರೂಪನು.

'ಇಂದ್ರೋ ಮಾಯಾಭಿಃ ಪುರುರೂಪ ಈಯತೇ' 'ಇಂದ್ರನು (ಪರಮೇಶ್ವರನು) ಮಾಯೆಗಳ ದ್ವಾರಾ ಅನೇಕ ರೂಪಗಳಿಂದ ಕಾಣುತ್ತಾನೆ' (ಬೃ. ಉ ೨. ೫. ೯).

**೨೨೨. ಬೃಹದ್ರೂಪಃ**—ವರಾಹ ಮೊದಲಾದ ಬೃಹದಾಕಾರದ ರೂಪ ಗಳುಳ್ಳವನು.

**೨೨೩. ಶಿಪಿವಿಷ್ಟಃ**—ಯಜ್ಞಮೂರ್ತಿಯಾಗಿರುವವನು.

ಭಗವಂತನು ಪಶುಗಳಲ್ಲಿ ಯಜ್ಞರೂಪದಿಂದಿರುವನಾದ್ದರಿಂದ ಶಿಪಿವಿಷ್ಟನು, ಎಂದರೆ ಯಜ್ಞಮೂರ್ತಿಯು. ಅಥವಾ ಶಿಪಿ ಎಂದರೆ ಕಿರಣಗಳು. ಭಗವಂತನು ಕಿರಣಗಳನ್ನು ಪ್ರವೇಶಿಸಿ ಅವುಗಳೊಳಗೆ ಅವಸ್ಥಿತನಾಗಿರುವನಾದ್ದರಿಂದ ಅವನಿಗೆ ಶಿಪಿವಿಷ್ಟ ಎಂದು ಹೆಸರು.

'ಯಜ್ಞೋ ವೈ ವಿಷ್ಣುಃ ಪಶವಃ ಶಿಪಿರ್ಯಜ್ಞ ಏವ ಪಶುಷು ಪ್ರತಿತಿಷ್ಠತಿ' 'ಯಜ್ಞವು ವಿಷ್ಣುವೇ. ಪಶುಗಳು ಶಿಪಿ. ಪಶುಗಳಲ್ಲಿ ಯಜ್ಞವೇ ಅವಸ್ಥಿತವಾಗಿದೆ' (ತೈ. ಸಂ. ೧. ೭. ೪).

**೨೨೪. ಪ್ರಕಾಶನಃ**—ಸಮಸ್ತ ವಸ್ತುಗಳನ್ನು ಪ್ರಕಾಶಪಡಿಸುವವನು.

**೨೨೫. ಓಜಸ್ತೇಜೋದ್ಯುತಿಧರಃ**—ಪ್ರಾಣಬಲ, ಶೌರ್ಯಾದಿಗುಣ ಗಳು ಮತ್ತು ಕಾಂತಿ—ಇವುಗಳನ್ನು ಧರಿಸಿರುವವನು.

ಓಜಸ್ಸು ಎಂದರೆ ಪ್ರಾಣಬಲ, ತೇಜಸ್ಸು ಎಂದರೆ ಶೌರ್ಯಾದಿಗುಣಗಳು, ದ್ಯುತಿ ಎಂದರೆ ಕಾಂತಿ. ಭಗವಂತನು ಪ್ರಾಣಬಲ, ಶೌರ್ಯಾದಿಗುಣಗಳು ಮತ್ತು ಕಾಂತಿ— ಇವುಗಳನ್ನು ಧರಿಸುವವನಾದ್ದರಿಂದ ಅವನಿಗೆ ಓಜಸ್ತೇಜೋದ್ಯುತಿಧರ ಎಂದು ಹೆಸರು. ಅಥವಾ ಭಗವಂತನು ಓಜಸ್ಸೂ (ಬಲವೂ) ತೇಜಸ್ಸೂ ಆಗಿರುವನಾದ್ದರಿಂದ ಓಜಸ್ತೇಜನು ಮತ್ತು ಭಗವಂತನು ಜ್ಞಾನರೂಪವಾದ ದ್ಯುತಿಯನ್ನು ಎಂದರೆ ಕಾಂತಿಯನ್ನು ಧರಿಸಿರುವನಾದ್ದರಿಂದ ದ್ಯುತಿಧರನು.

'ಬಲಂ ಬಲವತಾಂ ಚಾಹಮ್' 'ನಾನು ಬಲವಂತರಲ್ಲಿರುವ ಬಲವೂ ಆಗಿದ್ದೇನೆ' (ಗೀತಾ. ೭. ೧೧). 'ತೇಜಸ್ತೇಜಸ್ವಿನಾಮಹಮ್' 'ನಾನು ತೇಜಸ್ವಿಗಳಲ್ಲಿ ತೇಜಸ್ಸು (ಆಗಿದ್ದೇನೆ)' (ಗೀತಾ. ೭. ೧೦).

೨೭೬. ಪ್ರಕಾಶಾತ್ಮಾ—ಪ್ರಕಾಶಸ್ವರೂಪವಾದ ಆತ್ಮವುಳ್ಳವನು.

೨೭೭. ಪ್ರತಾಪನಃ—ಸೂರ್ಯ ಮೊದಲಾದ ವಿಭೂತಿಗಳಿಂದ ವಿಶ್ವವನ್ನು ತಪಿಸುವವನು.

೨೭೮. ಋದ್ಧಃ—ಧರ್ಮ, ಜ್ಞಾನ ಮತ್ತು ವೈರಾಗ್ಯ ಮೊದಲಾದುವುಗಳಿಂದ ಸಂಪನ್ನನಾಗಿರುವವನು.

೨೭೯. ಸ್ಪಷ್ಟಾಕ್ಷರಃ—ಉದಾತ್ತವಾದ ಓಂಕಾರರೂಪವಾದ ಅಕ್ಷರವುಳ್ಳವನು.

೨೮೦. ಮಂತ್ರಃ–ಋಗ್ಯಜುಸ್ಸಾಮರೂಪವಾದ ಮಂತ್ರವಾಗಿರುವವನು.

ಅಥವಾ ಭಗವಂತನು ಮಂತ್ರಗಳ ಮೂಲಕ ಅರಿಯಲ್ಪಡುವವನಾದ್ದರಿಂದ ಅವನಿಗೆ ಮಂತ್ರ ಎಂದು ಹೆಸರು.

೨೮೧. ಚಂದ್ರಾಂಶುಃ—ಸಂಸಾರತಾಪರೂಪವಾದ ಸೂರ್ಯತಾಪದಿಂದ ಸಂತಪ್ತಗೊಂಡ ಚಿತ್ತವುಳ್ಳವರನ್ನು ಚಂದ್ರನ ಶೀತಳವಾದ ಕಿರಣಗಳಂತೆ ಆಹ್ಲಾದಗೊಳಿಸುವವನು.

೨೮೨. ಭಾಸ್ಕರದ್ಯುತಿಃ — ಸೂರ್ಯನ ತೇಜಸ್ಸಿಗೆ ಸದೃಶನಾಗಿರುವವನು.

೨೮೩. ಅಮೃತಾಂಶೂದ್ಭವಃ — ಚಂದ್ರನ ಉದ್ಭವಸ್ಥಾನವಾಗಿರುವವನು.

ಸಮುದ್ರಮಂಥನಕಾಲದಲ್ಲಿ ಭಗವಂತನಿಂದ ಅಮೃತಾಂಶುವು ಎಂದರೆ ಚಂದ್ರನು ಹುಟ್ಟಿದನು. ಆದುದರಿಂದ ಭಗವಂತನಿಗೆ ಅಮೃತಾಂಶೂದ್ಭವ ಎಂದು ಹೆಸರು.

೨೮೪. ಭಾನುಃ—ಪ್ರಕಾಶಮಾನನಾಗಿರುವವನು.

'ತಮೇವ ಭಾಂತಮನುಭಾತಿ ಸರ್ವಮ್' 'ಪ್ರಕಾಶಿಸುತ್ತಿರುವ ಅವನನ್ನೇ (ಪರಮಾತ್ಮನನ್ನೇ) ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತದೆ.' (ಕ. ಉ. ೨. ೫. ೧೫).

**೨೮೫. ಶಶಬಿಂದುಃ**—ಚಂದ್ರನಂತಿರುವವನು.

ಮೊಲದಂತಿರುವ ಚಿಹ್ನೆಯುಳ್ಳ ಚಂದ್ರನಿಗೆ ಶಶಬಿಂದು ಎಂದು ಹೇಳುತ್ತಾರೆ. ಭಗವಂತನು ಚಂದ್ರನ ಹಾಗೆ ಪ್ರಜೆಗಳನ್ನೆಲ್ಲ ಪೋಷಿಸುವವನಾದ್ದರಿಂದ ಅವನಿಗೂ ಶಶಬಿಂದು ಎಂದು ಹೆಸರು.

'ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ' 'ರಸ ಸ್ವರೂಪನಾದ ಚಂದ್ರನಾಗಿ ಎಲ್ಲಾ ವನಸ್ಪತಿಗಳನ್ನು ಪೋಷಿಸುತ್ತೇನೆ' (ಗೀತಾ. ೧೫. ೧೩).

**೨೮೬. ಸುರೇಶ್ವರಃ**—ದೇವತೆಗಳಿಗೂ ಶುಭದಾಯಕರಿಗೂ ಪ್ರಭು ವಾಗಿರುವವನು.

**೨೮೭. ಔಷಧಮ್** — ಸಂಸಾರವೆಂಬ ರೋಗಕ್ಕೆ ಔಷಧವಾಗಿರು ವವನು.

**೨೮೮. ಜಗತಃ ಸೇತುಃ**—ಸಂಸಾರವನ್ನು ದಾಟಲು ಸೇತುವೆಯಂತಿರು ವವನು.

ಅಥವಾ ವರ್ಣಾಶ್ರಮಾದಿಗಳು ಒಂದಕ್ಕೊಂದು ಸೇರದೆ ಪ್ರತ್ಯೇಕವಾಗಿ ಇರಲು ಸೇತುವಿನ ಹಾಗೆ ಕಾರಣನಾಗಿರುವವನು.

**೨೮೯. ಸತ್ಯಧರ್ಮಪರಾಕ್ರಮಃ**—ಸತ್ಯವಾಗಿರುವ ಜ್ಞಾನಾದಿಗುಣ ಗಳೂ ಪರಾಕ್ರಮವೂ ಇರುವವನು.

**೨೯೦. ಭೂತಭವ್ಯಭವನ್ನಾಥಃ**—ಹಿಂದೆ ಹುಟ್ಟಿರುವ, ಇಂದು ಹುಟ್ಟು ತ್ತಿರುವ ಮತ್ತು ಮುಂದೆ ಹುಟ್ಟಲಿರುವ ಸಮಸ್ತ ಪ್ರಾಣಿಗಳಿಗೆ ಸ್ವಾಮಿ ಯಾಗಿರುವವನು.

ಅಥವಾ ಅವುಗಳನ್ನು ಆಳುವವನು; ಅವುಗಳಿಂದ ಯಾಚಿಸಲ್ಪಡುವವನು.

**೨೯೧. ಪವನಃ**—ಪವಿತ್ರಗೊಳಿಸುವವನು.

'ಪವನಃ ಪವತಾಮಸ್ಮಿ' 'ಪವಿತ್ರಗೊಳಿಸುವವರಲ್ಲಿ ನಾನು ವಾಯುವು' (ಗೀತಾ. ೧೦. ೩೧).

**೨೯೨. ಪಾವನಃ**—ಚಲಿಸುವಂತೆ ಮಾಡುವವನು.

'ಭೀಷಾsಸ್ಮಾದ್ವಾತಃ ಪವತೇ' 'ಈತನ (ಪರಮಾತ್ಮನ) ಭಯದಿಂದ ವಾಯುವು ಬೀಸುತ್ತಾನೆ' (ತೈ. ಉ. ೨. ೮).

**೨೯೩. ಅನಲಃ**—ಪರ್ಯಾಪ್ತವಿಲ್ಲದವನು.

ಅಥವಾ ಜೀವನು ಪ್ರಾಣಗಳನ್ನು ಅವು ತನ್ನ ಆತ್ಮ ಎಂಬ ಭಾವನೆಯಿಂದ ಸ್ವೀಕರಿಸುತ್ತಾನೆ. ಆದುದರಿಂದ ಜೀವನಿಗೆ ಅನಲ ಎಂದು ಹೆಸರು.

೨೯೪. ಕಾಮಹಾ—ಮುಮುಕ್ಷುಗಳಾದ ಭಕ್ತರ ಮತ್ತು ಹಿಂಸಕರ ಕಾಮಗಳನ್ನು (ಬಯಕೆಗಳನ್ನು) ನಾಶಮಾಡುವವನು.

೨೯೫. ಕಾಮಕೃತ್ — ಸಾತ್ತ್ವಿಕಸ್ವಭಾವವುಳ್ಳವರ ಆಶೆಗಳನ್ನು ಈಡೇರಿಸುವವನು.

ಅಥವಾ ಭಗವಂತನು ಕಾಮನ ಎಂದರೆ ಪ್ರದ್ಯುಮ್ನನ ಜನಕನಾದ್ದರಿಂದ ಅವನಿಗೆ ಕಾಮಕೃತ್ ಎಂದು ಹೆಸರು.

೨೯೬. ಕಾಂತಃ—ಅತ್ಯಂತ ರೂಪವಂತನು.

೨೯೭. ಕಾಮಃ—ಪುರುಷಾರ್ಥಗಳನ್ನು ಕಾಂಕ್ಷಿಸುವವರಿಂದ ಬಯಸಲ್ಪಡುವವನು.

೨೯೮. ಕಾಮಪ್ರದಃ — ಭಕ್ತರಿಗೆ ಇಷ್ಟಾರ್ಥಗಳನ್ನು ಪ್ರಕೃಷ್ಟವಾಗಿ ಕೊಡುವವನು.

೨೯೯. ಪ್ರಭುಃ—ಪ್ರಕೃಷ್ಟಭಾವದಿಂದ (ನಿರತಿಶಯವಾಗಿ) ಇರುವವನು.

೩೦೦. ಯುಗಾದಿಕೃತ್—ಕಾಲಭೇದವನ್ನು ಉಂಟುಮಾಡುವವನು.

ಅಥವಾ ಯುಗಗಳ ಆರಂಭವನ್ನು ಮಾಡುವವನು.

೩೦೧. ಯುಗಾವರ್ತಃ—ಕಾಲರೂಪದಿಂದ ಕೃತ ಮೊದಲಾದ ಯುಗಗಳನ್ನು ತಿರುಗಿಸುತ್ತಿರುವವನು.

೩೦೨. ನೈಕಮಾಯಃ—ಅನೇಕ ಮಾಯೆಗಳನ್ನು ಧರಿಸುವವನು.

ಭಗವಂತನಿಗೆ ಒಂದೇ ಮಾಯೆಯಲ್ಲ; ಅವನು ಅನೇಕ ಮಾಯೆಗಳನ್ನು ಧರಿಸುತ್ತಾನೆ. ಆದುದರಿಂದ ಅವನಿಗೆ ನೈಕಮಾಯ ಎಂದು ಹೆಸರು.

೩೦೩. ಮಹಾಶನಃ—ಪುಷ್ಕಳವಾದ ಭೋಜನವುಳ್ಳವನು.

ಭಗವಂತನು ಕಲ್ಪಾಂತ್ಯದಲ್ಲಿ ಸರ್ವವನ್ನು ಭಕ್ಷಿಸುತ್ತಾನೆ. ಆದುದರಿಂದ ಅವನ ಭೋಜನವು (ಅಶನವು) ಪುಷ್ಕಳವಾದುದು. ಆದುದರಿಂದ ಅವನಿಗೆ ಮಹಾಶನ ಎಂದು ಹೆಸರು.

೩೦೪. ಅದೃಶ್ಯಃ—ಸಮಸ್ತ ಬುದ್ಧಿ-ಇಂದ್ರಿಯಗಳಿಗೂ ಅಗಮ್ಯನಾಗಿರುವವನು.

೩೦೫. ವ್ಯಕ್ತರೂಪಃ—ಸ್ಥೂಲರೂಪದಿಂದ ವ್ಯಕ್ತವಾದ ಸ್ವರೂಪವುಳ್ಳವನು.

ಅಥವಾ ಭಗವಂತನು ಸ್ವಯಂಪ್ರಕಾಶಮಾನನಾದ್ದರಿಂದ ಯೋಗಿಗಳಿಗೆ ವ್ಯಕ್ತವಾಗುವ ರೂಪವುಳ್ಳವನು. ಆದುದರಿಂದ ಭಗವಂತನಿಗೆ ವ್ಯಕ್ತರೂಪ ಎಂದು ಹೆಸರು.

೩೦೬. **ಸಹಸ್ರಜಿತ್**—ಯುದ್ಧದಲ್ಲಿ ಸಹಸ್ರಾರು ದೇವಶತ್ರುಗಳನ್ನು ಜಯಿಸುವವನು.

೩೦೭. **ಅನಂತಜಿತ್**—ಸರ್ವಭೂತಗಳನ್ನೂ ಜಯಿಸುವವನು.

ಭಗವಂತನು ಅನಂತಶಕ್ತಿಯುಳ್ಳವನಾದ್ದರಿಂದ ಯುದ್ಧಕ್ರೀಡಾದಿಗಳಲ್ಲಿ ಸರ್ವತ್ರವೂ ಸರ್ವಭೂತಗಳನ್ನೂ ಜಯಿಸುತ್ತಾನೆ. ಆದುದರಿಂದ ಅವನಿಗೆ ಅನಂತಜಿತ್ ಎಂದು ಹೆಸರು.

೩೦೮. **ಇಷ್ಟಃ**— ಪರಮಾನಂದಸ್ವರೂಪನಾದ್ದರಿಂದ ಪ್ರಿಯನಾಗಿರುವವನು.

ಅಥವಾ ಭಗವಂತನು ಯಜ್ಞದ ಮೂಲಕ ಪೂಜಿಸಲ್ಪಡುವವನಾದ್ದರಿಂದ ಅವನಿಗೆ ಇಷ್ಟ ಎಂದು ಹೆಸರು.

೩೦೯. **ಅವಿಶಿಷ್ಟಃ**—ಸರ್ವಾಂತರ್ಯಾಮಿಯಾಗಿರುವವನು.

೩೧೦. **ಶಿಷ್ಟೇಷ್ಟಃ**—ವಿದ್ವಜ್ಜನರಿಗೆ ಪ್ರಿಯನಾದವನು.

ಅಥವಾ ಶಿಷ್ಟಜನರು ಭಗವಂತನಿಗೆ ಪ್ರಿಯರಾದವರಾದ್ದರಿಂದ ಭಗವಂತನು ಶಿಷ್ಟೇಷ್ಟನು. ಅಥವಾ ಶಿಷ್ಟಪುರುಷರಿಂದ ಭಗವಂತನು ಪೂಜಿಸಲ್ಪಡುತ್ತಾನೆ; ಆದುದರಿಂದ ಅವನಿಗೆ ಶಿಷ್ಟೇಷ್ಟ ಎಂದು ಹೆಸರು.

'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ' 'ನಾನು ಜ್ಞಾನಿಗೆ ಅತ್ಯಂತ ಪ್ರಿಯನಾಗಿದ್ದೇನೆ ಮತ್ತು ಅವನು ನನಗೆ ಪ್ರಿಯನಾಗಿದ್ದಾನೆ' (ಗೀತಾ. ೭. ೧೭).

೩೧೧. **ಶಿಖಂಡೀ**—ನವಿಲಿನ ಗರಿಯನ್ನು ಶಿರೋಭೂಷಣವಾಗಿ ಧರಿಸಿದವನು.

ಗೋಪವೇಷವನ್ನು ಧರಿಸಿ ಗೋಪಾಲನಾಗಿದ್ದಾಗ ಭಗವಂತನು ನವಿಲಿನ ಗರಿಯನ್ನು ಶಿರೋಭೂಷಣವಾಗಿ ಧರಿಸಿದ್ದನು. ಆದುದರಿಂದ ಅವನಿಗೆ ಶಿಖಂಡೀ ಎಂದು ಹೆಸರು.

೩೧೨. **ನಹುಷಃ**—ಭೂತಗಳನ್ನು ಮಾಯೆಯಿಂದ ಬಂಧಿಸುವವನು.

೩೧೩. **ವೃಷಃ**—ಧರ್ಮರೂಪನಾಗಿರುವವನು.

ಧರ್ಮವು ಕಾಮಗಳನ್ನು (ಬಯಕೆಗಳನ್ನು) ವರ್ಷಿಸುತ್ತದೆ. ಆದುದರಿಂದ ಅದು ವೃಷ ಎಂದು ಕರೆಯಲ್ಪಡುತ್ತದೆ. ಭಗವಂತನು ಧರ್ಮರೂಪನಾದ್ದರಿಂದ ಅವನಿಗೂ ವೃಷ ಎಂದು ಹೆಸರು.

೩೧೪. **ಕ್ರೋಧಹಾ**—ಸಾಧುಗಳ ಕೋಪವನ್ನು ನಾಶಮಾಡುವವನು.

೩೧೫. **ಕ್ರೋಧಕೃತ್ಕರ್ತಾ**— (ಅಸಾಧುಪುರುಷರ ಮೇಲೆ) ಕೋಪವನ್ನು ಮಾಡುವವನು ಮತ್ತು (ಜಗತ್ತನ್ನು) ಉಂಟುಮಾಡುವವನು.

ಅಸಾಧುಪುರುಷರ ಮೇಲೆ ಕೋಪವನ್ನು ಮಾಡುವವನಾದ್ದರಿಂದ ಭಗವಂತನು ಕ್ರೋಧಕೃತ್.

ಯಾವುದು ಮಾಡಲ್ಪಡುತ್ತದೋ ಅದು ಕರ್ಮ ಎಂದೆನಿಸುತ್ತದೆ. ಜಗತ್ತೊಂದು ಕರ್ಮ. ಭಗವಂತನು ಅದರ ಕರ್ತೃವು ; ಆದುದರಿಂದ ಭಗವಂತನು ಕರ್ತಾ.

**೩೧೬. ವಿಶ್ವಬಾಹುಃ**—ವಿಶ್ವದಲ್ಲಿರುವ ವಸ್ತುಗಳಿಗೆಲ್ಲ ಆಲಂಬನವಾಗಿರುವವನು.

ಅಥವಾ ವಿಶ್ವದಲ್ಲಿರುವ ಬಾಹುಗಳೆಲ್ಲ ಭಗವಂತನವುಗಳಾದ್ದರಿಂದ ಭಗವಂತನು ವಿಶ್ವಬಾಹು ಅಥವಾ ಭಗವಂತನ ಬಾಹುಗಳು ವಿಶ್ವದಲ್ಲೆಲ್ಲ ವ್ಯಾಪಿಸಿನೆಯಾದ್ದರಿಂದ ಭಗವಂತನು ವಿಶ್ವಬಾಹು.

**೩೧೭. ಮಹೀಧರಃ**—ಪೃಥ್ವಿಯನ್ನು ಧಾರಣಮಾಡಿರುವವನು.

ಅಥವಾ ಪೂಜೆಯನ್ನು ಸ್ವೀಕರಿಸುವವನು.

**೩೧೮. ಅಚ್ಯುತಃ**—ಷಡ್ಭಾವರಹಿತನು.

'ಶಾಶ್ವತಂ ಶಿವಮಚ್ಯುತಮ್' '(ಭಗವಂತನು) ಶಾಶ್ವತನೂ ಮಂಗಳಸ್ವರೂಪನೂ ಅಚ್ಯುತನೂ (ಆಗಿರುವನು).'

**೩೧೯. ಪ್ರಥಿತಃ**—ಜಗದುತ್ಪತ್ತಿಯೇ ಮೊದಲಾದ ಕರ್ಮಗಳಿಂದ ಪ್ರಸಿದ್ಧನಾಗಿರುವವನು.

**೩೨೦. ಪ್ರಾಣಃ** — ಸೂತ್ರಾತ್ಮನಾಗಿ ಪ್ರಜೆಗಳನ್ನು ಜೀವಿಸುವಂತೆ ಮಾಡುವವನು.

**೩೨೧. ಪ್ರಾಣದಃ**—ಸುರಾಸುರರಿಗೆ ಪ್ರಾಣವನ್ನು ಮತ್ತು ಬಲವನ್ನು ಕೊಡುವವನು.

ಅಥವಾ ಸುರಾಸುರರ ಪ್ರಾಣವನ್ನು ಮತ್ತು ಬಲವನ್ನು ನಾಶಮಾಡುವವನು.

**೩೨೨. ವಾಸವಾನುಜಃ**—ಇಂದ್ರನಿಗೆ ತಮ್ಮನಾಗಿ ಹುಟ್ಟಿದವನು.

(ವಾಮನಾವತಾರದಲ್ಲಿ) ಭಗವಂತನು ಅದಿತಿಯಲ್ಲಿ ಕಶ್ಯಪನಿಂದ ಇಂದ್ರನಿಗೆ ತಮ್ಮನಾಗಿ ಹುಟ್ಟಿದನು. ಆದುದರಿಂದ ಅವನಿಗೆ ವಾಸವಾನುಜ ಎಂದು ಹೆಸರು.

**೩೨೩. ಅಪಾಂ ನಿಧಿಃ**—ನೀರುಗಳಿಗೆ ಆಶ್ರಯವಾದ ಸಾಗರವಾಗಿರುವವನು.

ಎಲ್ಲಿ ನೀರು ಒಟ್ಟುಗೂಡುವುದೋ ಆ ನೀರಿನ ಸಂಗ್ರಹಕ್ಕೆ (ಸಾಗರಕ್ಕೆ) ಅಪಾಂ ನಿಧಿ ಎಂದು ಹೇಳುತ್ತಾರೆ. ಸಾಗರವು ಭಗವಂತನ ಒಂದು ವಿಭೂತಿಯಾದ್ದರಿಂದ ಭಗವಂತನಿಗೂ ಅಪಾಂ ನಿಧಿ ಎಂದು ಹೆಸರು.

'ಸರಸಾಮಸ್ಮಿ ಸಾಗರಃ' 'ಸರೋವರಗಳಲ್ಲಿ ನಾನು ಸಾಗರನು' (ಗೀತಾ. ೧೦. ೨೪).

೩೨೪. ಅಧಿಷ್ಠಾನಮ್—ಸಕಲಭೂತಗಳಿಗೆ ನೆಲೆಯಾಗಿರುವವನು.

ಭಗವಂತನು ಜಗತ್ತಿನ ಉಪಾದಾನಕಾರಣನಾದ್ದರಿಂದ ಭೂತಗಳೆಲ್ಲ ಅವನಲ್ಲಿ ಅವಸ್ಥಿತವಾಗಿರುವುವು. ಆದುದರಿಂದ ಅವನಿಗೆ ಅಧಿಷ್ಠಾನ ಎಂದು ಹೆಸರು.

'ಮತ್ಸ್ಥಾನಿ ಸರ್ವಭೂತಾನಿ' 'ಸರ್ವಭೂತಗಳು ನನ್ನಲ್ಲಿ ಅವಸ್ಥಿತನಾಗಿರುವುವು' (ಗೀತಾ. ೯. ೪).

೩೨೫. ಅಪ್ರಮತ್ತಃ—ಪ್ರಮಾದವನ್ನು ಮಾಡದಿರುವವನು.

ಭಗವಂತನು ಅಧಿಕಾರಿಗಳಿಗೆ ಅವರವರ ಕರ್ಮಾನುರೂಪವಾದ ಫಲವನ್ನು ಕೊಡುವಾಗ ಪ್ರಮಾದವನ್ನು ಮಾಡುವುದಿಲ್ಲ; ಆದುದರಿಂದ ಅವನಿಗೆ ಅಪ್ರಮತ್ತನೆಂದು ಹೆಸರು.

೩೨೬. ಪ್ರತಿಷ್ಠಿತಃ–ತನ್ನ ಮಹಿಮೆಯಲ್ಲೇ ಪ್ರತಿಷ್ಠಿತನಾಗಿರುವವನು.

'ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ' 'ಭಗವಂತನು ಯಾವುದರಲ್ಲಿ ಪ್ರತಿಷ್ಠಿತನಾಗಿದ್ದಾನೆ? ತನ್ನ ಮಹಿಮೆಯಲ್ಲಿ (ಪ್ರತಿಷ್ಠಿತನಾಗಿದ್ದಾನೆ)' (ಛಾ. ಉ. ೭. ೨೪. ೧).

೩೨೭. ಸ್ಕಂದಃ — ಅಮೃತರೂಪದಿಂದ ಹರಿಯುವವನು ಅಥವಾ ವಾಯುರೂಪದಿಂದ ಇಂಗಿಸುವವನು.

೩೨೮. ಸ್ಕಂದಧರಃ—ಧರ್ಮಪಥಕ್ಕೆ ಆಧಾರವಾಗಿರುವವನು.

೩೨೯. ಧುರ್ಯಃ—ಸಮಸ್ತಭೂತಗಳ ಜನ್ಮಾದಿರೂಪವಾದ ಹೊರೆಯನ್ನು ಹೊತ್ತಿರುವವನು.

೩೩೦. ವರದಃ—ಇಚ್ಛಿಸಿದ ವರಗಳನ್ನು ಕೊಡುವವನು.

ಅಥವಾ ಯಜಮಾನರೂಪದಿಂದ (ಯಜ್ಞಮಾಡುವವನ ರೂಪದಿಂದ) ಗೋವನ್ನು ದಕ್ಷಿಣೆಯಾಗಿ ಕೊಡುವವನು.

೩೩೧. ವಾಯುವಾಹನಃ—ಆವಹ ಮೊದಲಾದ ಸಪ್ತವಾಯುಗಳನ್ನು ಬೀಸುವಂತೆ ಮಾಡುವವನು.

೩೩೨. ವಾಸುದೇವಃ—ವಾಸುದೇವನು.

ಭಗವಂತನು ಎಲ್ಲ ವಸ್ತುಗಳಲ್ಲಿ ವಾಸಮಾಡುತ್ತಾನೆ. ಎಲ್ಲ ವಸ್ತುಗಳನ್ನು ತನ್ನಲ್ಲಿ ವಾಸಿಸುವಂತೆ ಮಾಡುತ್ತಾನೆ ಮತ್ತು ಎಲ್ಲ ವಸ್ತುಗಳನ್ನು ಆಚ್ಛಾದಿಸುತ್ತಾನೆ. ಆದುದರಿಂದ ಅವನಿಗೆ ವಾಸು ಎಂದು ಹೇಳುತ್ತಾರೆ. ಭಗವಂತನು ಪ್ರಕಾಶಮಾನನಾದ್ದರಿಂದ ಮತ್ತು ಸ್ತುತಿಸಲ್ಪಡುವವನಾದ್ದರಿಂದ ಅವನಿಗೆ ದೇವ ಎಂದು ಹೇಳುತ್ತಾರೆ. ವಾಸುವೂ ದೇವನೂ ಆಗಿರುವನಾದ್ದರಿಂದ ಭಗವಂತನು ವಾಸುದೇವನು.

'ಛಾದಯಾಮಿ ಜಗತ್ಸರ್ವಂ . . . ವಾಸುದೇವಸ್ತತಃ ಸ್ಮೃತಃ' 'ನಾನು ಸೂರ್ಯನಂತೆ ಆಗಿ ಕಿರಣಗಳಿಂದ ಇಡೀ ಜಗತ್ತನ್ನು ಆಚ್ಛಾದಿಸುತ್ತೇನೆ

ಮತ್ತು ನಾನು ಸಕಲಭೂತಗಳಿಗೂ ವಾಸಸ್ಥಾನವಾಗಿದ್ದೇನೆ. ಆದುದರಿಂದ ನಾನು ವಾಸುದೇವನೆಂದು ಕರೆಯಲ್ಪಡುತ್ತೇನೆ' (ಮಹಾ. ಶಾಂತಿ. ೩೪೧. ೪೧).

**೩೩೩. ಬೃಹದ್ಭಾನುಃ**—ಮಹಾಕಿರಣಗಳುಳ್ಳವನು.

'ಬೃಹಂತೋ ಭಾನವೋ ಯಸ್ಯ . . . ಸ ಬೃಹದ್ಭಾನುರುಚ್ಯತೇ' 'ಯಾವನಿಗೆ ಸೂರ್ಯಚಂದ್ರಾದಿಗಳನ್ನು ಪ್ರವೇಶಿಸುವಂತಹ ಮಹಾಕಿರಣಗಳಿವೆಯೋ ಮತ್ತು ಯಾವನು ಆ ಕಿರಣಗಳಿಂದ ಇಡೀ ವಿಶ್ವವನ್ನು ಬೆಳಗಿಸುತ್ತಾನೋ ಆ ಭಗವಂತನು ಬೃಹದ್ಭಾನು ಎಂದು ಹೇಳಲ್ಪಡುತ್ತಾನೆ.'

**೩೩೪. ಆದಿದೇವಃ**—ಆದಿಯೂ ದೇವನೂ ಆಗಿರುವವನು.

ಭಗವಂತನು ಎಲ್ಲಕ್ಕೂ ಕಾರಣನಾಗಿರುವವನೂ ಮತ್ತು ಎಲ್ಲ ವಸ್ತುಗಳನ್ನು ಬೆಳಗಿಸುವದೇ ಮೊದಲಾದ ಗುಣಗಳುಳ್ಳವನೂ ಆಗಿರುವನಾದ್ದರಿಂದ ಅವನಿಗೆ ಆದಿದೇವ ಎಂದು ಹೆಸರು.

**೩೩೫. ಪುರಂದರಃ**—ಸುರಶತ್ರುಗಳ ನಗರಗಳನ್ನು ಧ್ವಂಸಮಾಡುವವನು.

**೩೩೬. ಅಶೋಕಃ**—ಶೋಕವೇ ಮೊದಲಾದ ಷಡೂರ್ಮಿಗಳಿಂದ (ಆರು ತರದ ಕ್ಲೇಶಗಳಿಂದ) ವರ್ಜಿತನಾಗಿರುವವನು.

**೩೩೭. ತಾರಣಃ**—ಸಂಸಾರಸಾಗರವನ್ನು ದಾಟಿಸುವವನು.

**೩೩೮. ತಾರಃ**—ಗರ್ಭವಾಸ ಜನ್ಮ ಮುಪ್ಪು ಮತ್ತು ಮರಣ—ಇವುಗಳ ರೂಪದಿಂದಿರುವ ಭಯವನ್ನು ದಾಟಿಸುವವನು.

**೩೩೯. ಶೂರಃ**—ಪರಾಕ್ರಮಶಾಲಿಯಾಗಿರುವವನು.

**೩೪೦. ಶೌರಿಃ**—ಶೂರರಾಜನ ಕುಲದಲ್ಲಿ ವಸುದೇವನ ಪುತ್ರನಾಗಿ ಹುಟ್ಟಿದವನು.

**೩೪೧. ಜನೇಶ್ವರಃ**—ಸರ್ವಜಂತುಗಳಿಗೆ ಈಶ್ವರನಾಗಿರುವವನು.

**೩೪೨. ಅನುಕೂಲಃ**—ಎಲ್ಲರಿಗೂ ಅನುಕೂಲನಾಗಿರುವವನು.

ಭಗವಂತನು ಸರ್ವರ ಆತ್ಮನಾದ್ದರಿಂದ ಸರ್ವರಿಗೂ ಅನುಕೂಲನಾಗಿರುವನು; ಏಕೆಂದರೆ ಯಾರೂ ತಮಗೆ ತಾವೇ ಪ್ರತಿಕೂಲರಾಗುವುದಿಲ್ಲ. ಆದುದರಿಂದ ಭಗವಂತನಿಗೆ ಅನುಕೂಲ ಎಂದು ಹೆಸರು.

**೩೪೩. ಶತಾವರ್ತಃ**—ಧರ್ಮರಕ್ಷಣೆಗಾಗಿ ನೂರು ಅವತಾರಗಳನ್ನು ಧರಿಸಿದವನು.

ಅಥವಾ ದೇಹದಲ್ಲಿರುವ ನೂರು ನಾಡಿಗಳಲ್ಲಿ ಪ್ರಾಣರೂಪದಿಂದಿರುವವನು.

**೩೪೪. ಪದ್ಮೀ**—ಕೈಯಲ್ಲಿ ಪದ್ಮವನ್ನು ಹಿಡಿದಿರುವವನು.

**೩೪೫. ಪದ್ಮನಿಭೇಕ್ಷಣಃ**—ತಾವರೆಯಂತೆ ಕಣ್ಣುಗಳುಳ್ಳವನು.

೩೪೬. ಪದ್ಮನಾಭಃ—ತಾವರೆಯ ಮಧ್ಯದಲ್ಲಿ ಕರ್ಣಿಕೆಯಲ್ಲಿ ಅವಸ್ಥಿತನಾಗಿರುವವನು.

೩೪೭. ಅರವಿಂದಾಕ್ಷಃ—ಪದ್ಮದಂತೆ ಕಣ್ಣುಗಳುಳ್ಳವನು.

೩೪೮. ಪದ್ಮಗರ್ಭಃ—ಹೃದಯವೆಂಬ ಕಮಲದ ಮಧ್ಯದಲ್ಲಿ ಪೂಜಿಸಲ್ಪಡುವವನು.

೩೪೯. ಶರೀರಭೃತ್—ಶರೀರಗಳಿಗೆ ಆಧಾರವಾಗಿರುವವನು.

ದೇಹಧಾರಿಗಳ ದೇಹಗಳನ್ನು ಅನ್ನರೂಪದಿಂದ ಅಥವಾ ಪ್ರಾಣರೂಪದಿಂದ ಪೋಷಿಸುತ್ತ ಅವುಗಳಿಗೆ ಆಧಾರವಾಗಿರುವವನು.

ಅಥವಾ ತನ್ನ ಮಾಯೆಯಿಂದ ಶರೀರಗಳನ್ನು ಧರಿಸುವವನು.

೩೫೦. ಮಹದ್ಧಿಃ—ಮಹಾವಿಭೂತಿಗಳುಳ್ಳವನು.

೩೫೧. ಋದ್ಧಃ—ಪ್ರಪಂಚರೂಪದಿಂದ ಇರುವವನು.

೩೫೨. ವೃದ್ಧಾತ್ಮಾ—ಪುರಾತನವಾದ ಆತ್ಮವುಳ್ಳವನು.

೩೫೩. ಮಹಾಕ್ಷಃ—ವಿಸ್ತಾರವಾದ ಉತ್ಕೃಷ್ಟವಾದ ಎರಡು ಅಥವಾ ಅನೇಕ ನೇತ್ರಗಳುಳ್ಳವನು.

೩೫೪. ಗರುಡಧ್ವಜಃ—ಗರುಡಾಂಕಿತವಾದ ಧ್ವಜವುಳ್ಳವನು.

೩೫೫. ಅತುಲಃ—ಅನುಪಮನು.

'ನ ತಸ್ಯ ಪ್ರತಿಮಾ ಅಸ್ತಿ ಯಸ್ಯ ನಾಮ ಮಹದ್ಯಶಃ' 'ಯಾವನ ಹೆಸರು ಮಹದ್ಯಶನೆಂದು ಇರುವುದೋ ಅವನಿಗೆ (ಆ ಭಗವಂತನಿಗೆ) ಸಮಾನವಾದುದು ಯಾವುದೂ ಇಲ್ಲ' (ಶ್ವೇ. ಉ ೪. ೧೯). 'ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ' 'ನಿನಗೆ ಸಮಾನನಾದವನು ಯಾವನೂ ಇಲ್ಲ. (ಹೀಗಿರುವಾಗ) ನಿನಗಿಂತ ಅಧಿಕನಾದವನು ಅನ್ಯನೆಲ್ಲಿರುವನು ?' (ಗೀತಾ. ೧೧. ೪೩).

೩೫೬. ಶರಭಃ—ನಾಶವುಳ್ಳವುಗಳಾದ ಶರೀರಗಳಲ್ಲಿ ಪ್ರತ್ಯಗಾತ್ಮನಾಗಿ ಶೋಭಿಸುವವನು.

೩೫೭. ಭೀಮಃ—ಎಲ್ಲರಿಗೂ ಭಯವನ್ನುಂಟುಮಾಡುವವನು (ಎಲ್ಲರಿಂದಲೂ ಹೆದರಲ್ಪಡುವವನು). ಅಥವಾ,

ಅಭೀಮಃ—ಸನ್ಮಾರ್ಗವರ್ತಿಗಳಿಗೆ ಅಭಯವನ್ನುಂಟುಮಾಡುವವನು

೩೫೮. ಸಮಯಜ್ಞಃ—ಸೃಷ್ಟಿಸ್ಥಿತಿಸಂಹಾರಗಳ ಸಮಯವನ್ನು ತಿಳಿದವನು.

ಅಥವಾ ಸರ್ವಭೂತಗಳನ್ನು ಸಮತ್ವದೃಷ್ಟಿಯಿಂದ ಕಾಣುವುದೇ ಭಗವಂತನ ಶ್ರೇಷ್ಠವಾದ ಪೂಜೆಯಾದ್ದರಿಂದ ಭಗವಂತನಿಗೆ ಸಮಯಜ್ಞ ಎಂದು ಹೆಸರು.

'ಸಮತ್ವಮಾರಾಧನಮಚ್ಯುತಸ್ಯ' 'ಎಲ್ಲರಲ್ಲಿ ಸಮತ್ವಭಾವನೆಯನ್ನು (ಇಟ್ಟುಕೊಳ್ಳುವುದೇ) ಅಚ್ಯುತನ ಆರಾಧನೆ' (ವಿಷ್ಣು. ೧. ೧೭. ೯೦).

**೩೫೯. ಹವಿರ್ಹರಿಃ**—ಯಜ್ಞಗಳಲ್ಲಿ (ಕೊಡಲ್ಪಡುವ) ಹವಿರ್ಭಾಗವನ್ನು ಸ್ವೀಕರಿಸುವವನು.

'ಅಹಂ ಹಿ ಸರ್ವಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ' 'ನಾನೇ ಸರ್ವಯಜ್ಞಗಳ ಭೋಕ್ತೃವು ಮತ್ತು ತಾನೇ ಸರ್ವಯಜ್ಞಗಳಿಗೆ ಪ್ರಭುವು' (ಗೀತಾ. ೯. ೨೪).

ಅಥವಾ ಹವಿಸ್ಸಿನ ಮೂಲಕ ಪೂಜಿಸಲ್ಪಡುವನಾದ್ದರಿಂದ ಭಗವಂತನು ಹವಿಸ್ಸು ಎಂದೆನಿಸುತ್ತಾನೆ ಮತ್ತು ಸ್ಮರಣಮಾತ್ರದಿಂದ ಮನುಷ್ಯರ ಪಾಪವನ್ನು ಅಥವಾ ಸಂಸಾರವನ್ನು ನಾಶಮಾಡುವವನಾದ್ದರಿಂದ ಹರಿಯೆಂದೆನಿಸುತ್ತಾನೆ.

ಅಥವಾ ಭಗವಂತನು ಹರಿದ್ವರ್ಣದವನಾದ್ದರಿಂದ ಹರಿಯು.

**೩೬೦. ಸರ್ವಲಕ್ಷಣಲಕ್ಷಣ್ಯಃ**—ಉತ್ಕೃಷ್ಟಜ್ಞಾನಸ್ವರೂಪನು.

ಸರ್ವಪ್ರಮಾಣಗಳಿಂದ ಯಾವ ಜ್ಞಾನವು ಉಂಟಾಗುವುದೋ ಅದಕ್ಕೆ ಸರ್ವಲಕ್ಷಣಲಕ್ಷಣ ಎಂದು ಹೇಳುತ್ತಾರೆ. ಈ ಜ್ಞಾನದಲ್ಲಿ ಅತ್ಯಂತ ಉತ್ಕೃಷ್ಟವಾದ ಜ್ಞಾನವೇ (ಅಂದರೆ ಪರಮಾತ್ಮನೇ) ಸರ್ವಲಕ್ಷಣಲಕ್ಷಣ್ಯವು; ಏಕೆಂದರೆ ಅದು ಪರಮಾರ್ಥಸ್ವರೂಪವಾದುದು. ಆದುದರಿಂದ ಭಗವಂತನಿಗೆ ಸರ್ವಲಕ್ಷಣಲಕ್ಷಣ್ಯ ಎಂದು ಹೆಸರು.

**೩೬೧. ಲಕ್ಷ್ಮೀವಾನ್**—ಲಕ್ಷ್ಮಿಯಿಂದೊಡಗೂಡಿದವನು.

ಲಕ್ಷ್ಮಿಯು ನಿತ್ಯವೂ ವಿಷ್ಣುವಿನ ವಕ್ಷಃಸ್ಥಳದಲ್ಲಿ ವಾಸಮಾಡುತ್ತಿರುವಳಾದ್ದರಿಂದ ವಿಷ್ಣುವಿಗೆ ಲಕ್ಷ್ಮೀವಾನ್ ಎಂದು ಹೆಸರು.

**೩೬೨. ಸಮಿತಿಂಜಯಃ**—ಯುದ್ಧವನ್ನು ಜಯಿಸುವವನು.

**೩೬೩. ವಿಕ್ಷರಃ**—ನಾಶವಿಲ್ಲದವನು.

**೩೬೪. ರೋಹಿತಃ**—ಸ್ವೇಚ್ಛೆಯಿಂದ ರೋಹಿತವರ್ಣದ ರೂಪವನ್ನು ಧರಿಸಿದವನು.

ಅಥವಾ ರೋಹಿತ ಎಂಬ ಹೆಸರಿನ ಮತ್ಸ್ಯದ ರೂಪವನ್ನು ಧರಿಸಿದವನು.

**೩೬೫. ಮಾರ್ಗಃ**—ಮುಮುಕ್ಷುಗಳಿಂದ ಹುಡುಕಲ್ಪಡುವವನು.

ಅಥವಾ ಭಗವಂತನಿಂದ ಪರಮಾನಂದವು ಲಭಿಸುವುದಾದ್ದರಿಂದ ಅವನಿಗೆ ಮಾರ್ಗ ಎಂದು ಹೆಸರು.

**೩೬೬. ಹೇತುಃ**-ಜಗತ್ತಿನ ಉಪಾದಾನಕಾರಣವೂ ನಿಮಿತ್ತಕಾರಣವೂ ಆಗಿರುವವನು.

೩೬೭. ದಾಮೋದರಃ—ದಾಮೋದರನು.

ಇಂದ್ರಿಯನಿಗ್ರಹ ಮೊದಲಾದ ಸಾಧನೆಗಳಿಂದ ಯಾವ ಉತ್ಕೃಷ್ಟವಾದ ಬುದ್ಧಿಯು ಉಂಟಾಗುವುದೋ ಆ ಬುದ್ಧಿಯಿಂದ ಭಗವಂತನು ತಿಳಿಯಲ್ಪಡುತ್ತಾನೆ. ಆದುದರಿಂದ ಭಗವಂತನಿಗೆ ದಾಮೋದರ ಎಂದು ಹೆಸರು. ಅಥವಾ ಭಗವಂತನು ಯಶೋಧೆಯಿಂದ ಉದರಪ್ರದೇಶದಲ್ಲಿ ಹಗ್ಗದಿಂದ ಕಟ್ಟಲ್ಪಟ್ಟಿದ್ದನಾದ್ದರಿಂದ ಅವನಿಗೆ ದಾಮೋದರ ಎಂದು ಹೆಸರು.

'ದಾಮಾನಿ ಲೋಕನಾಮಾನಿ . . . ಶ್ರೀಧರಃ ಶ್ರೀಸಮಾಶ್ರಿತಃ' 'ದಾಮ ಎಂದು ಲೋಕಗಳಿಗೆ ಹೇಳುತ್ತಾರೆ. ಲೋಕಗಳೆಲ್ಲ ಭಗವಂತನ ಹೊಟ್ಟೆಯಲ್ಲಿರುವುವಾದ್ದರಿಂದ ಶ್ರೀಧರನೂ ಶ್ರೀಸಮಾಶ್ರಿತನೂ ಆದ ಭಗವಂತನಿಗೆ ದಾಮೋದರ ಎಂದು ಹೆಸರು' (ವ್ಯಾಸವಚನ).

೩೬೮. ಸಹಃ—ಎಲ್ಲರನ್ನು ಸೋಲಿಸುವವನು ಅಥವಾ ಕ್ಷಮಿಸುವವನು.

೩೬೯. ಮಹೀಧರಃ—ಪರ್ವತಗಳ ರೂಪದಿಂದ ಪೃಥ್ವಿಗೆ ಆಧಾರವಾಗಿರುವವನು.

'ವನಾನಿ ವಿಷ್ಣುರ್ಗಿರಯೋ ದಿಶಶ್ಚ' 'ವಿಷ್ಣುವೇ ಅರಣ್ಯಗಳು, ಪರ್ವತಗಳು ಮತ್ತು ದಿಕ್ಕುಗಳು (ಆಗಿರುವನು)' (ವಿಷ್ಣು. ೨. ೧೨. ೩೮).

೩೭೦. ಮಹಾಭಾಗಃ—ಸ್ವೇಚ್ಛೆಯಿಂದ ದೇಹವನ್ನು ಧರಿಸಿ ಉತ್ಕೃಷ್ಟವಾದ ಭೋಜನಗಳನ್ನು (ಪರಮೈಶ್ವರ್ಯವನ್ನು) ಭೋಗಿಸುವವನು.

ಅಥವಾ ಅವತಾರಗಳಲ್ಲಿ ಮಹಾಭಾಗ್ಯಶಾಲಿಯಾಗಿರುವನಾದ್ದರಿಂದ ಭಗವಂತನಿಗೆ ಮಹಾಭಾಗ ಎಂದು ಹೆಸರು.

೩೭೧. ವೇಗವಾನ್—ತೀವ್ರವಾದ ಗತಿಯುಳ್ಳವನು.

'ಅನೇಜದೇಕಂ ಮನಸೋ ಜವೀಯಃ' '(ಆತ್ಮವು) ಅಚಲವು; (ಸರ್ವಭೂತಗಳಲ್ಲಿಯೂ) ಒಂದೇ; ಮನಸ್ಸಿಗಿಂತ ಅಧಿಕವೇಗವುಳ್ಳದ್ದು' (ಈ. ಉ. ೪).

೩೭೨. ಅಮಿತಾಶನಃ — ಸಂಹಾರಸಮಯದಲ್ಲಿ ಇಡೀ ವಿಶ್ವವನ್ನು ಭಕ್ಷಿಸುವವನು.

೩೭೩. ಉದ್ಭವಃ—ಪ್ರಪಂಚದ ಉತ್ಪತ್ತಿಗೆ ಉಪಾದಾನಕಾರಣನಾಗಿರುವವನು.

ಅಥವಾ ಸಂಸಾರವನ್ನು ಮೀರಿಹೋಗಿರುವವನು.

೩೭೪. ಕ್ಷೋಭಣಃ—ಜಗದುತ್ಪತ್ತಿಕಾಲದಲ್ಲಿ ಪ್ರಕೃತಿಯನ್ನೂ ಪುರುಷನನ್ನೂ ಪ್ರವೇಶಿಸಿ ಕ್ಷೋಭೆಯನ್ನುಂಟುಮಾಡಿದವನು.

೩೭೫. ದೇವಃ—ದೇವನು.

ಭಗವಂತನು ಸೃಷ್ಟ್ಯಾದಿಗಳಿಂದ ಕ್ರೀಡಿಸುವವನೂ, ಅಸುರಾದಿಗಳನ್ನು ಜಯಿಸುವವನೂ, ಸರ್ವಭೂತಗಳಲ್ಲಿ ವ್ಯವಹರಿಸುವವನೂ, ಆತ್ಮಭಾವದಿಂದ ಪ್ರಕಾಶಿಸುವವನೂ, ಶ್ಲಾಘ್ಯಪುರುಷರಿಂದ ಸ್ತುತಿಸಲ್ಪಡುವವನೂ ಮತ್ತು ಸರ್ವತ್ರವೂ ಹೋಗುವವನೂ ಆಗಿರುವನು. ಆದುದರಿಂದ ಅವನಿಗೆ ದೇವ ಎಂದು ಹೆಸರು.

**೩೭೬. ಶ್ರೀಗರ್ಭಃ**—ಜಗದ್ರೂಪವಾದ ಶ್ರೀಯನ್ನು ಎಂದರೆ ವಿಭೂತಿಯನ್ನು ತನ್ನ ಗರ್ಭದಲ್ಲಿ ಧರಿಸಿರುವವನು.

**೩೭೭. ಪರಮೇಶ್ವರಃ**—ಪರಮಶ್ರೇಷ್ಠನೂ ಜಗತ್ತಿಗೆ ಸ್ವಾಮಿಯೂ ಆಗಿರುವವನು.

**೩೭೮. ಕರಣಮ್**—ಜಗದುತ್ಪತ್ತಿಗೆ ಅತ್ಯಂತ ಶ್ರೇಷ್ಠವಾದ ಸಾಧನವಾಗಿರುವವನು.

**೩೭೯. ಕಾರಣಮ್** — ಜಗತ್ತಿನ ಉಪಾದಾನಕಾರಣವೂ ನಿಮಿತ್ತಕಾರಣವೂ ಆಗಿರುವವನು.

**೩೮೦. ಕರ್ತಾ**—ಸ್ವತಂತ್ರನಾಗಿರುವವನು.

**೩೮೧. ವಿಕರ್ತಾ**—ವಿಚಿತ್ರವಾದ ಪ್ರಪಂಚವನ್ನು ಹುಟ್ಟಿಸುವವನು.

**೩೮೨. ಗಹನಃ**—ಗೂಢವಾಗಿರುವವನು.

ಭಗವಂತನ ಸ್ವರೂಪಸಾಮರ್ಥ್ಯಗಳನ್ನು ಮತ್ತು ಲೀಲೆಗಳನ್ನು ತಿಳಿಯಲು ಅಶಕ್ಯವಾದ್ದರಿಂದ ಅವನಿಗೆ ಗಹನ ಎಂದು ಹೆಸರು.

**೩೮೩. ಗುಹಃ**—ಮಾಯೆಯಿಂದ ತನ್ನ ಸ್ವರೂಪವನ್ನು ಮುಚ್ಚಿಕೊಳ್ಳುವವನು.

'ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ' 'ಯೋಗಮಾಯೆಯಿಂದ ಆವರಿಸಲ್ಪಟ್ಟ ನಾನು ಎಲ್ಲರಿಗೂ ಪ್ರತ್ಯಕ್ಷನಲ್ಲ' (ಗೀತಾ ೭. ೨೫).

**೩೮೪. ವ್ಯವಸಾಯಃ**—ಜ್ಞಾನಮಾತ್ರಸ್ವರೂಪನಾಗಿರುವವನು.

**೩೮೫. ವ್ಯವಸ್ಥಾನಃ**—ಸಕಲವಸ್ತುಗಳಿಗೆ ನೆಲೆಯಾಗಿರುವವನು.

ಸರ್ವವಸ್ತುಗಳು ಭಗವಂತನಲ್ಲಿ ವ್ಯವಸ್ಥಿತವಾಗಿರುವುವು. ಆದುದರಿಂದ ಭಗವಂತನಿಗೆ ವ್ಯವಸ್ಥಾನ ಎಂದು ಹೆಸರು. ಅಥವಾ ಭಗವಂತನು ಲೋಕಪಾಲಾದಿ ಅಧಿಕಾರಿಗಳನ್ನೂ, ಜರಾಯುಜ ಅಂಡಜ ಸ್ವೇದಜ ಮತ್ತು ಉದ್ಭಿಜ್ಜಪ್ರಾಣಿಗಳನ್ನೂ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಮತ್ತು ಅವಾಂತರವರ್ಣಗಳನ್ನೂ, ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಮತ್ತು ಸಂನ್ಯಾಸ ಆಶ್ರಮಗಳನ್ನೂ ಮತ್ತು ಅವುಗಳ ಧರ್ಮವೇ ಮೊದಲಾದುವುಗಳನ್ನೂ ವಿಂಗಡಿಸುವವನಾದ್ದರಿಂದ ಅವನಿಗೆ ವ್ಯವಸ್ಥಾನ ಎಂದು ಹೆಸರು.

**೩೮೬. ಸಂಸ್ಥಾನಃ**—ಪ್ರಲಯಕಾಲದಲ್ಲಿ ಸಕಲವಸ್ತುಗಳಿಗೆ ಆವಾಸಸ್ಥಾನವಾಗಿರುವವನು.

೩೮೭. ಸ್ಥಾನದಃ—ಧ್ರುವಾದಿಗಳಿಗೆ ಅವರವರ ಕರ್ಮಾನುರೂಪವಾದ ಸ್ಥಾನವನ್ನು ಕೊಡುವವನು.

೩೮೮. ಧ್ರುವಃ—ನಾಶವಿಲ್ಲದವನು.

೩೮೯. ಪರರ್ಧಿಃ—ಶ್ರೇಷ್ಠವಾದ ವಿಭೂತಿಯುಳ್ಳವನು.

೩೯೦. ಪರಮಸ್ಪಷ್ಟಃ—ಉತ್ಕೃಷ್ಟವಾದ ಶೋಭೆಯುಳ್ಳವನು ಮತ್ತು ಸಂವಿದ್ರೂಪನು.

ಭಗವಂತನು ಉತ್ಕೃಷ್ಟವಾದ ಶೋಭೆಯುಳ್ಳವನಾದ್ದರಿಂದ ಪರಮನು ಅಥವಾ ಅನನ್ಯಾಧೀನವಾದ ಸಿದ್ಧಿಯುಳ್ಳವನಾದ್ದರಿಂದ ಸರ್ವೋತ್ಕೃಷ್ಟನು ; ಮತ್ತು ಸಂವಿದ್ ರೂಪನಾದ್ದರಿಂದ ಸ್ಪಷ್ಟನು. ಹೀಗೆ ಪರಮನೂ ಸ್ಪಷ್ಟನೂ ಆಗಿರುವನಾದ್ದರಿಂದ ಭಗವಂತನು ಪರಮಸ್ಪಷ್ಟನು.

೩೯೧. ತುಷ್ಟಃ—ಪರಮಾನಂದೈಕರೂಪನು.

೩೯೨. ಪುಷ್ಟಃ—ಸರ್ವತ್ರವೂ ಪರಿಪೂರ್ಣನಾಗಿರುವವನು.

೩೯೩. ಶುಭೇಕ್ಷಣಃ—ಶುಭವಾದ ದರ್ಶನವುಳ್ಳವನು.

ಭಗವದ್ದರ್ಶನವು ಶುಭಕರವೂ, ಮುಮುಕ್ಷುಗಳಿಗೆ ಮೋಕ್ಷವನ್ನು ಕೊಡುವಂತಹದೂ, ಭೋಗಾರ್ಥಿಗಳಿಗೆ ಭೋಗವನ್ನು ಕೊಡುವಂತಹದೂ, ಸರ್ವಸಂದೇಹಗಳನ್ನು ನಿವಾರಿಸುವಂತಹದೂ, ಪಾಪಿಗಳನ್ನು ಪವಿತ್ರರನ್ನಾಗಿ ಮಾಡುವಂತಹದೂ, ಹೃದಯಗ್ರಂಥಿಗಳನ್ನೆಲ್ಲ ಕತ್ತರಿಸುವಂತಹದೂ, ಸರ್ವಕರ್ಮಗಳನ್ನು ನಾಶಮಾಡುವಂತಹದೂ ಮತ್ತು ಅವಿದ್ಯೆಯ ನಿವೃತ್ತಿಯನ್ನು ಮಾಡುವಂತಹದೂ ಆಗಿರುವುದರಿಂದ ಭಗವಂತನಿಗೆ ಶುಭೇಕ್ಷಣ ಎಂದು ಹೆಸರು.

೩೯೪. ರಾಮಃ—ರಾಮನು.

ನಿತ್ಯಾನಂದಸ್ವರೂಪನಾದ ಭಗವಂತನಲ್ಲಿ ಯೋಗಿಗಳು ರಮಿಸುತ್ತಾರೆ. ಆದುದರಿಂದ ಭಗವಂತನಿಗೆ ರಾಮ ಎಂದು ಹೆಸರು. ಅಥವಾ ಸ್ವೇಚ್ಛೆಯಿಂದ ರಮಣೀಯವಾದ ದೇಹವನ್ನು ಧರಿಸಿ ದಶರಥನ ಮಗನಾಗಿ (ರಾಮನಾಗಿ) ಹುಟ್ಟಿದವನು.

‘ರಮಂತೇ ಯೋಗಿನೋ ಯಸ್ಮಿನ್ . . . ಪರಂ ಬ್ರಹ್ಮಾಭಿಧೀಯತೇ’ ‘ಯಾವ ನಿತ್ಯಾನಂದಸ್ವರೂಪವುಳ್ಳ ಚಿದಾತ್ಮದಲ್ಲಿ ಯೋಗಿಗಳು ರಮಿಸುತ್ತಾರೋ ಆ ಪರಬ್ರಹ್ಮವು ರಾಮ ಎಂಬ ಪದದಿಂದ ಕರೆಯಲ್ಪಡುತ್ತದೆ’ (ಪದ್ಮಪುರಾಣ).

೩೯೫. ವಿರಾಮಃ—ಪ್ರಾಣಿಗಳಿಗೆಲ್ಲ ವಿರಾಮಸ್ಥಾನವಾಗಿರುವವನು.

ಪ್ರಾಣಿಗಳೆಲ್ಲ ಭಗವಂತನಲ್ಲಿ ಅವಸಾನಹೊಂದುತ್ತವೆ. ಆದುದರಿಂದ ಭಗವಂತನಿಗೆ ವಿರಾಮ ಎಂದು ಹೆಸರು.

೩೯೬. ವಿರತಃ—ವಿಷಯಸೇವನೆಯಲ್ಲಿ ಆಸಕ್ತಿಯಿಲ್ಲದವನು.

೩೯೭. ಮಾರ್ಗಃ—ಮೋಕ್ಷಕ್ಕೆ ಮಾರ್ಗವಾಗಿರುವವನು.

ಯಾವನನ್ನು ಅರಿತು ಮುಮುಕ್ಷುಗಳಾದ ಯೋಗಿಗಳು ಅಮೃತತ್ವವನ್ನು ಪಡೆಯುತ್ತಾರೋ ಆ ಭಗವಂತನೇ ಮೋಕ್ಷಕ್ಕೆ ಮಾರ್ಗವಾಗಿರುವನು.

'ನಾನ್ಯಃ ಪಂಥಾ ವಿದ್ಯತೇಽಯನಾಯ' '(ಪರಮಾತ್ಮನು ಹೊರತು) ಮೋಕ್ಷಕ್ಕೆ ಅನ್ಯ ದಾರಿ ಇಲ್ಲ' (ಶ್ವೇ. ಉ. ೬. ೧೫).

೩೯೮. **ನೇಯಃ**—ಸಮ್ಯಕ್‌ಜ್ಞಾನದ ದ್ವಾರಾ ಜೀವನಿಂದ ಹೊಂದಲ್ಪಡುವವನು.

ಸಮ್ಯಕ್ ಜ್ಞಾನದ ದ್ವಾರಾ ಜೀವನು ಪರಮಾತ್ಮಭಾವಕ್ಕೆ ಒಯ್ಯಲ್ಪಡುತ್ತಾನೆ. ಆದುದರಿಂದ ಪರಮಾತ್ಮನಿಗೆ ನೇಯ ಎಂದು ಹೆಸರು.

೩೯೯. **ನಯಃ**—ನೇತೃವು (ಜೀವರನ್ನು ಮೋಕ್ಷಕ್ಕೆ ಒಯ್ಯುವವನು).

೪೦೦. **ಅನಯಃ**—ತನಗೆ ಬೇರೆ ಯಾರೂ ನೇತೃವಿಲ್ಲದವನು.

೪೦೧. **ವೀರಃ**—ಪರಾಕ್ರಮಶಾಲಿಯಾಗಿರುವವನು.

೪೦೨. **ಶಕ್ತಿಮತಾಂ ಶ್ರೇಷ್ಠಃ**—ಬ್ರಹ್ಮನೇ ಮೊದಲಾದ ಶಕ್ತಿವಂತರಿಗಿಂತಲೂ ಅಧಿಕ ಶಕ್ತಿಶಾಲಿಯಾಗಿರುವವನು.

೪೦೩. **ಧರ್ಮಃ**—ಸಕಲಭೂತಗಳಿಗೆ ಆಧಾರವಾಗಿರುವವನು.

೪೦೪. **ಧರ್ಮವಿದುತ್ತಮಃ**—ಧರ್ಮವನ್ನು ತಿಳಿದವರಲ್ಲಿ ಉತ್ತಮನಾಗಿರುವವನು.

ಶ್ರುತಿಗಳೂ ಸ್ಮೃತಿಗಳೂ ಯಾವನ ಆಜ್ಞೆಗಳಾಗಿರುವುವೋ ಆ ಭಗವಂತನೇ ಧರ್ಮವನ್ನು ತಿಳಿದವರಲ್ಲಿ ಉತ್ತಮನಾಗಿರುವನು ; ಆದುದರಿಂದ ಅವನು ಧರ್ಮವಿದುತ್ತಮನು.

೪೦೫. **ವೈಕುಂಠಃ**—ವಿವಿಧ ಗತಿಗಳನ್ನು (ಪಥಗಳನ್ನು) ಹಿಡಿಯದಂತೆ ಪ್ರತಿಬಂಧಿಸುವವನು.

ಭಗವಂತನು ಜಗದಾರಂಭದಲ್ಲಿ ಬೇರೆಬೇರೆಯಾಗಿ ಹೋದ ಭೂತಗಳನ್ನು ಪರಸ್ಪರ ಒಟ್ಟುಗೂಡಿಸಿ ಅವುಗಳ ಗತಿಯನ್ನು ಪ್ರತಿಬಾಧಿಸುತ್ತಾನೆ. ಆದುದರಿಂದ ಅವನು ವೈಕುಂಠನು.

'ಮಯಾ ಸಂಶ್ಲೇಷಿತಾ ಭೂಮಿಃ . . . ವೈಕುಂಠತ್ವಂ ತತೋ ಮಮ' 'ನಾನು ಪೃಥ್ವಿಯನ್ನು ಜಲದೊಂದಿಗೂ, ಆಕಾಶವನ್ನು ವಾಯುವಿನೊಂದಿಗೂ ಮತ್ತು ವಾಯುವನ್ನು ತೇಜಸ್ಸಿನೊಂದಿಗೂ ಒಟ್ಟುಗೂಡಿಸಿದೆನು. ಆದುದರಿಂದ ನಾನು ವೈಕುಂಠನು' (ಮಹಾ. ಶಾಂತಿ ೩೪೨. ೮೦).

೪೦೬. **ಪುರುಷಃ**-ಸಮಸ್ತವಸ್ತುಗಳಿಗಿಂತಲೂ ಮುಂಚಿನಿಂದಿರುವವನು.

ಅಥವಾ ಸರ್ವಪಾಪಗಳನ್ನು ನಾಶಮಾಡುವವನಾದ್ದರಿಂದ ಭಗವಂತನು ಪುರುಷನು ; ಅಥವಾ ಶರೀರದಲ್ಲಿ ಶಯನಮಾಡುವವನಾದ್ದರಿಂದ ಪುರುಷನು.

'ಸ ಯತ್ಪೂರ್ವೋಽಸ್ಮಾತ್ ಸರ್ವಸ್ಮಾತ್ ಸರ್ವಾನ್ ಪಾಪ್ಮನ ಔಷತ್ ತಸ್ಮಾತ್ ಪುರುಷಃ' 'ಅವನು (ಆತ್ಮನು) (ಎಲ್ಲರಿಗಿಂತ) ಮೊದಲನೆಯವನಾಗಿದ್ದು, ಈ ಎಲ್ಲರಿಗಿಂತ (ಮೊದಲೇ) ಸರ್ವಪಾಪಗಳನ್ನು ದಹಿಸಿದ್ದರಿಂದ ಪುರುಷನು' (ಬೃ. ಉ. ೧. ೪. ೧).

'ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯಃ' ಆ ಈ ಪುರುಷನು ಎಲ್ಲ ಪುರಗಳಲ್ಲಿ (ದೇಹಗಳಲ್ಲಿ) ವಾಸಮಾಡುತ್ತಾನೆ; (ಆದುದರಿಂದ ಅವನು ಪುರುಷ ಎಂದೆನಿಸುತ್ತಾನೆ.) (ಬೃ. ಉ. ೨. ೫. ೧೮).

೪೦೭. ಪ್ರಾಣಃ—ಕ್ಷೇತ್ರಜ್ಞರೂಪದಿಂದ ಜೀವಿಸುವವನು.

ಅಥವಾ ಪ್ರಾಣರೂಪದಿಂದ ಶರೀರದಲ್ಲಿ ಕೆಲಸಮಾಡುವವನು.

'ಚೇಷ್ಟಾಂ ಕರೋತಿ ಶ್ವಸನಸ್ವರೂಪೀ' 'ಪ್ರಾಣವಾಯುರೂಪದಿಂದ (ಭಗವಂತನು) ಕೆಲಸಮಾಡುತ್ತಾನೆ' (ವಿಷ್ಣು).

೪೦೮. ಪ್ರಾಣದಃ-ಪ್ರಲಯಾದಿಕಾಲಗಳಲ್ಲಿ ಪ್ರಾಣಿಗಳ ಪ್ರಾಣಗಳನ್ನು ನಾಶಮಾಡುವವನು.

೪೦೯. ಪ್ರಣವಃ—ಓಂಕಾರದ ದ್ವಾರಾ ಸ್ತುತಿಸಲ್ಪಡುವವನು.

ಅಥವಾ ಭಗವಂತನು ನಮಸ್ಕರಿಸಲ್ಪಡುವವನಾದ್ದರಿಂದ ಪ್ರಣವನು.

'ಪ್ರಣಮಂತೀಹ ವೈ ವೇದಾಸ್ತಸ್ಮಾತ್ ಪ್ರಣವ ಉಚ್ಯತೇ' 'ಭಗವಂತನನ್ನು ವೇದಗಳು ನಮಸ್ಕರಿಸುತ್ತವೆ. ಆದುದರಿಂದ ಭಗವಂತನು ಪ್ರಣವ ಎಂದು ಕರೆಯಲ್ಪಡುತ್ತಾನೆ' (ಸನತ್ಕುಮಾರವಚನ).

೪೧೦. ಪೃಥುಃ—ಪ್ರಪಂಚರೂಪದಿಂದ ವಿಸ್ತರಿಸಿದವನು.

೪೧೧. ಹಿರಣ್ಯಗರ್ಭಃ—ಹಿರಣ್ಯಗರ್ಭನ (ಬ್ರಹ್ಮನ) ಗರ್ಭವಾಗಿರುವವನು.

ಹಿರಣ್ಯಗರ್ಭನ ಉತ್ಪತ್ತಿಗೆ ಕಾರಣವಾದ ಹಿರಣ್ಮಯವಾದ ಅಂಡವು ಯಾವನ ವೀರ್ಯದಿಂದ ಹುಟ್ಟಿತೋ ಆ ಭಗವಂತನು ಅವನ (ಹಿರಣ್ಯಗರ್ಭನ) ಗರ್ಭವಾಗಿರುವನಾದ್ದರಿಂದ ಭಗವಂತನಿಗೂ ಹಿರಣ್ಯಗರ್ಭ ಎಂದು ಹೆಸರು.

೪೧೨. ಶತ್ರುಘ್ನಃ—ದೇವಶತ್ರುಗಳನ್ನು ಸಂಹಾರಮಾಡುವವನು.

೪೧೩. ವ್ಯಾಪ್ತಃ—ಕಾರಣರೂಪದಿಂದ ಸರ್ವಕಾರ್ಯಗಳನ್ನು ವ್ಯಾಪಿಸಿರುವವನು.

೪೧೪. ವಾಯುಃ—ಗಂಧವನ್ನು ಉಂಟುಮಾಡುವವನು.

'ಪುಣ್ಯೋ ಗಂಧಃ ಪೃಥಿವ್ಯಾಂ ಚ' 'ನಾನು ಪೃಥ್ವಿಯಲ್ಲಿ ಪರಿಮಳಯುಕ್ತವಾದ ಗಂಧವಾಗಿದ್ದೇನೆ' (ಗೀತಾ. ೭. ೯).

೪೧೫. ಅಧೋಕ್ಷಜಃ—ಸ್ವರ್ಗಲೋಕ ಮತ್ತು ಭೂಲೋಕ—ಇವುಗಳ ಮಧ್ಯದಲ್ಲಿ ಹುಟ್ಟಿದವನು.

ಅಥವಾ ಇಂದ್ರಿಯಗಳು ಅಂತರ್ಮುಖವಾಗಿ ಹರಿಯುವಾಗ ಪ್ರತ್ಯಕ್ಷನಾಗುವವನಾದ್ದರಿಂದ ಭಗವಂತನು ಅಧೋಕ್ಷಜನು.

೪೧೬. ಋತುಃ—ಋತು-ಶಬ್ದದಿಂದ ನಿರ್ದೇಶಿಸಲ್ಪಡುವವನು.

ಕಾಲರೂಪನಾದ ಭಗವಂತನು ಋತು-ಶಬ್ದದಿಂದ ನಿರ್ದೇಶಿಸಲ್ಪಡುತ್ತಾನೆ. ಆದುದರಿಂದ ಅವನಿಗೆ ಋತು ಎಂದು ಹೆಸರು.

೪೧೭. ಸುದರ್ಶನಃ—ಸುಂದರವಾದ ದರ್ಶನವುಳ್ಳವನು.

ಭಗವದ್ದರ್ಶನವು (ಎಂದರೆ ಭಗವದ್ಜ್ಞಾನವು) ಸುಂದರವಾದುದು; ನಿರ್ವಾಣರೂಪವಾದ ಫಲವುಳ್ಳದ್ದು. ಆದುದರಿಂದ ಅಥವಾ ಭಗವಂತನು ಪದ್ಮದಲಗಳಂತೆ ವಿಶಾಲವಾದ ಮತ್ತು ಸುಂದರವಾದ ಕಣ್ಣುಗಳುಳ್ಳವನಾದ್ದರಿಂದ ಅಥವಾ ಭಗವಂತನು ಭಕ್ತರಿಗೆ ಸುಲಭವಾಗಿ ಪ್ರತ್ಯಕ್ಷನಾಗುವವನಾದ್ದರಿಂದ ಅವನಿಗೆ ಸುದರ್ಶನ ಎಂದು ಹೆಸರು.

೪೧೮. ಕಾಲಃ—ಸರ್ವವಸ್ತುಗಳನ್ನೂ ಗಣನೆಮಾಡುವವನು.

'ಕಾಲಃ ಕಲಯತಾಮಹಮ್' 'ಗಣನೆಮಾಡುವವರಲ್ಲಿ ನಾನು ಕಾಲನು' (ಗೀತಾ. ೧೦. ೩೦).

೪೧೯. ಪರಮೇಷ್ಠೀ—ತನ್ನ ಪ್ರಕೃಷ್ಟವಾದ ಮಹಿಮೆಯಿಂದ ಕೂಡಿ ಭಕ್ತರ ಹೃದಯಾಕಾಶದಲ್ಲಿ ಅವಸ್ಥಿತನಾಗಿರುವುದನ್ನು ತನ್ನ ಸ್ವಭಾವವಾಗಿ ಉಳ್ಳವನು.

೪೨೦. ಪರಿಗ್ರಹಃ—ಶರಣಾರ್ಥಿಗಳಿಂದ ಸರ್ವಕಡೆಗಳಿಂದಲೂ ಗ್ರಹಿಸಲ್ಪಡುವವನು.

ಭಗವಂತನು ಸರ್ವವ್ಯಾಪಿಯಾದ್ದರಿಂದ ಅವನನ್ನು ಶರಣಾರ್ಥಿಗಳು ಸರ್ವಕಡೆಗಳಿಂದಲೂ ಗ್ರಹಿಸುತ್ತಾರೆ ಅಥವಾ ಅರಿಯುತ್ತಾರೆ. ಅಥವಾ, ಭಗವಂತನು ಭಕ್ತರಿಂದ ಸಮರ್ಪಿಸಲ್ಪಟ್ಟ ಪತ್ರಪುಷ್ಪಾದಿಗಳನ್ನು ಸ್ವೀಕರಿಸುತ್ತಾನೆ. ಆದುದರಿಂದ ಅವನಿಗೆ ಪರಿಗ್ರಹ ಎಂದು ಹೆಸರು.

೪೨೧. ಉಗ್ರಃ ಸೂರ್ಯಾದಿಗಳಿಗೂ ಭಯವನ್ನು ಹುಟ್ಟಿಸುವವನು.

'ಭೀಷೋದೇತಿ ಸೂರ್ಯಃ' '(ಭಗವಂತನ) ಭಯದಿಂದ ಸೂರ್ಯನು ಉದಯಿಸುತ್ತಾನೆ' (ತೈ. ಉ. ೨. ೮).

೪೨೨. ಸಂವತ್ಸರಃ—ಸಕಲಭೂತಗಳ ವಾಸಸ್ಥಾನವಾಗಿರುವವನು.

೪೨೩. ದಕ್ಷಃ—ಜಗದ್ರೂಪದಿಂದ ಅಭಿವೃದ್ಧಿಹೊಂದುವವನು.

ಅಥವಾ ಸಮಸ್ತಕರ್ಮಗಳನ್ನು ಕ್ಷಿಪ್ರವಾಗಿ ಮಾಡುವವನು.

೪೨೪. ವಿಶ್ರಾಮಃ—ಮೋಕ್ಷರೂಪವಾದ ವಿಶ್ರಾಂತಿಯನ್ನು ಕೊಡುವವನು.

ಹಸಿವು ಮತ್ತು ಬಾಯಾರಿಕೆ ಮೊದಲಾದ ಷಡೂರ್ಮಿಗಳಿಂದ ತರಂಗಿತವಾದ ಸಂಸಾರಸಾಗರದಲ್ಲಿ, ಅವಿದ್ಯೆಯೇ ಮೊದಲಾದ ಮಹಾಕ್ಲೇಶಗಳಿಂದಲೂ ಮದ ಮಾತ್ಸರ್ಯಗಳೇ ಮೊದಲಾದ ಉಪಕ್ಲೇಶಗಳಿಂದಲೂ ವಶೀಕರಿಸಲ್ಪಟ್ಟು, ವಿಶ್ರಾಂತಿಯನ್ನು ಬಯಸುವವರಿಗೆ ಮೋಕ್ಷರೂಪವಾದ ವಿಶ್ರಾಂತಿಯನ್ನು ಕೊಡುವವನು.

**೪೨೫. ವಿಶ್ವದಕ್ಷಿಣಃ**—ಎಲ್ಲರಿಗಿಂತ ಅಧಿಕವಾದ ಸಾಮರ್ಥ್ಯವುಳ್ಳವನು.

ಅಥವಾ ಸರ್ವಕರ್ಮಗಳಲ್ಲಿ ಕೌಶಲವುಳ್ಳವನು. ಆದುದರಿಂದ ಅವನಿಗೆ ವಿಶ್ವದಕ್ಷಿಣ ಎಂದು ಹೆಸರು.

**೪೨೬. ವಿಸ್ತಾರಃ**—ಸಮಸ್ತಲೋಕಗಳಿಗೆ ವಿಸ್ತಾರವನ್ನುಂಟುಮಾಡುವವನು.

ಸಮಸ್ತಲೋಕಗಳು ಭಗವಂತನಲ್ಲಿ ವಿಸ್ತಾರವನ್ನು (ಅಭಿವೃದ್ಧಿಯನ್ನು) ಹೊಂದುತ್ತವೆ. ಆದುದರಿಂದ ಭಗವಂತನಿಗೆ ವಿಸ್ತಾರ ಎಂದು ಹೆಸರು.

**೪೨೭. ಸ್ಥಾವರಸ್ಥಾಣುಃ**—ಸ್ಥಿರವಾಗಿ ನಿಲ್ಲುವ ಸ್ವಭಾವವುಳ್ಳವನು. ಮತ್ತು ಪೃಥಿವ್ಯಾದಿಗಳಿಗೆ ನೆಲೆಯಾಗಿರುವವನು.

ಭಗವಂತನು ಸ್ಥಿರವಾಗಿ ನಿಲ್ಲುವ ಸ್ವಭಾವವುಳ್ಳವನಾದುದರಿಂದ ಸ್ಥಾವರನು ಮತ್ತು ಸ್ಥಿರವಾಗಿ ನಿಲ್ಲುವ ಸ್ವಭಾವವುಳ್ಳ ಪೃಥಿವ್ಯಾದಿಗಳು ಅವನಲ್ಲಿ ಅವಸ್ಥಿತವಾಗಿರುವುದರಿಂದ ಭಗವಂತನು 'ಸ್ಥಾಣುವು.'

**೪೨೮. ಪ್ರಮಾಣಮ್**–ಜ್ಞಾನರೂಪದಿಂದ ಪ್ರಮಾಣವಾಗಿರುವವನು.

**೪೨೯. ಬೀಜಮವ್ಯಯಮ್**—ಜಗತ್ತಿಗೆ ನಾಶರಹಿತವಾದ ಕಾರಣನಾಗಿರುವವನು.

ಭಗವಂತನಿಗೆ ಅನ್ಯಥಾಭಾವವು (ಭಾವಾಂತರ) ಇಲ್ಲವಾದುದರಿಂದ ಅವನು ಜಗತ್ತಿಗೆ (ನಾಶರಹಿತವಾದ) ಕಾರಣವಾಗಿರುವನು.

**೪೩೦. ಅರ್ಥಃ**—ಎಲ್ಲರಿಂದಲೂ ಬಯಸಲ್ಪಡುವವನು.

ಭಗವಂತನು ಸುಖಸ್ವರೂಪನಾದುದರಿಂದ ಎಲ್ಲರಿಂದಲೂ ಬಯಸಲ್ಪಡುತ್ತಾನೆ. ಆದುದರಿಂದ ಅವನಿಗೆ ಅರ್ಥ ಎಂದು ಹೆಸರು.

**೪೩೧. ಅನರ್ಥಃ**—ಯಾವ ಪ್ರಯೋಜನವೂ ಇಲ್ಲದವನು.

ಭಗವಂತನು ಆಪ್ತಕಾಮನಾದುದರಿಂದ ಅವನು ಪಡೆಯಬೇಕಾಗಿರುವ ಪ್ರಯೋಜನವು ಯಾವುದೂ ಇಲ್ಲ. ಆದುದರಿಂದ ಅವನು ಅನರ್ಥನು.

**೪೩೨. ಮಹಾಕೋಶಃ**—ತನ್ನ ಸ್ವರೂಪವನ್ನು ಮುಚ್ಚುವ ಅನ್ನಮಯಾದಿ ಮಹಾಕೋಶಗಳುಳ್ಳವನು.

**೪೩೩. ಮಹಾಭೋಗಃ** — ಸುಖರೂಪವಾದ ಮಹಾಭೋಗವುಳ್ಳವನು.

**೪೩೪. ಮಹಾಧನಃ**—ಹೇರಳವಾದ ಭೋಗಸಾಧನರೂಪವಾದ ಧನವುಳ್ಳವನು.

**೪೩೫. ಅನಿರ್ವಿಣ್ಣಃ**—ದುಃಖವಿಲ್ಲದವನು.

ಭಗವಂತನು ಆಪ್ತಕಾಮನಾದುದರಿಂದ (ಸರ್ವಕಾಮಗಳನ್ನು ಹೊಂದಿ ಪರಿಪೂರ್ಣನಾಗಿರುವವನಾದುದರಿಂದ) ಅವನಿಗೆ ದುಃಖವಿಲ್ಲ. ಆದುದರಿಂದ ಅವನು ಅನಿರ್ವಿಣ್ಣನು.

**೪೩೬. ಸ್ಥವಿಷ್ಠಃ**—ವೈರಾಜರೂಪದಿಂದ ಇರುವವನು.

'ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ' 'ಅಗ್ನಿಯು (ಭಗವಂತನ) ಶಿರಸ್ಸು, ಚಂದ್ರಸೂರ್ಯರು ಕಣ್ಣುಗಳು' (ಮುಂ. ಉ. ೨. ೧. ೪).

**೪೩೭. ಅಭೂಃ**—ಜನ್ಮರಹಿತನು ಅಥವಾ **ಭೂಃ**—ಇರುವವನು.

**೪೩೮. ಧರ್ಮಯೂಪಃ** — ಧರ್ಮಗಳಿಗೆಲ್ಲ ಆಧಾರಸ್ತಂಭವಾಗಿರುವವನು.

ಯಜ್ಞಪಶುವು ಹೇಗೆ ಯೂಪಕ್ಕೆ ಕಟ್ಟಲ್ಪಡುತ್ತದೆಯೋ ಹಾಗೆಯೇ ಭಗವದಾರಾಧನಾರೂಪವಾದ ಧರ್ಮಗಳೆಲ್ಲ ಭಗವಂತನಿಗೆ ಕಟ್ಟಲ್ಪಟ್ಟವೆ; (ಎಂದರೆ ಭಗವಂತನು ಧರ್ಮಗಳಿಗೆಲ್ಲ ಆಧಾರಸ್ತಂಭವಾಗಿರುವನು). ಆದುದರಿಂದ ಅವನು ಧರ್ಮಯೂಪನು.

**೪೩೯. ಮಹಾಮಖಃ**—ಯಜ್ಞಗಳನ್ನು ಮಹತ್ತಾಗಿ ಮಾಡುವವನು.

ಯಾವನಿಗೆ ಸಮರ್ಪಿಸಲ್ಪಟ್ಟ ಯಜ್ಞಗಳು ನಿರ್ವಾಣರೂಪವಾದ ಫಲವನ್ನು ಕೊಟ್ಟು ಮಹತ್ತಾದುವುಗಳು ಆಗುವುವೋ ಆ ಭಗವಂತನು ಮಹಾಮಖನು.

**೪೪೦. ನಕ್ಷತ್ರನೇಮಿಃ**-ನಕ್ಷತ್ರಮಂಡಲದ ಪ್ರವರ್ತಕನಾಗಿರುವವನು.

ಇಡೀ ಜ್ಯೋತಿರ್ಮಂಡಲವನ್ನು ತಿರುಗಿಸುತ್ತ ಧ್ರುವನು ಶಿಶುಮಾರಾಕೃತಿಯುಳ್ಳ ನಕ್ಷತ್ರಮಂಡಲದ ಪುಚ್ಛಪ್ರದೇಶದಲ್ಲಿ ಅವಸ್ಥಿತನಾಗಿರುವನು. ವಿಷ್ಣುವು ಆ ಶಿಶುಮಾರಾಕೃತಿಯ ನಕ್ಷತ್ರಮಂಡಲದ ಮಧ್ಯದಲ್ಲಿ ಜ್ಯೋತಿರ್ಮಂಡಲದ ಕೇಂದ್ರದಂತೆ ಅದರ ಪ್ರವರ್ತಕನಾಗಿ ಇದ್ದಾನೆ. ಆದುದರಿಂದ ವಿಷ್ಣುವಿಗೆ ನಕ್ಷತ್ರನೇಮಿ ಎಂದು ಹೆಸರು.

ಸ್ವಾಧ್ಯಾಯಬ್ರಾಹ್ಮಣದಲ್ಲಿ ಶಿಶುಮಾರವರ್ಣನೆಯಲ್ಲಿ ವಿಷ್ಣುವು ಶಿಶುಮಾರದ ಹೃದಯನಾಗಿರುವನು ಎಂದು ಹೇಳಿದೆ.

**೪೪೧. ನಕ್ಷತ್ರೀ**—ಚಂದ್ರರೂಪನು.

ಭಗವಂತನು ಚಂದ್ರರೂಪದಿಂದ ನಕ್ಷತ್ರೀ ಎಂದು ಕರೆಯಲ್ಪಡುತ್ತಾನೆ.

'ನಕ್ಷತ್ರಾಣಾಮಹಂ ಶಶೀ' 'ನಕ್ಷತ್ರಗಳಲ್ಲಿ ನಾನು ಶಶಿಯು'(ಗೀತಾ ೧೦,೨೧).

**೪೪೨. ಕ್ಷಮಃ** — ಸಮಸ್ತಕಾರ್ಯಗಳಲ್ಲಿ ಸಮರ್ಥನಾಗಿರುವವನು; ಅಥವಾ ಸಹನೆಯುಳ್ಳವನು.

'ಕ್ಷಮಯಾ ಪೃಥಿವೀಸಮಃ' 'ಸಹನೆಯಲ್ಲಿ (ಶ್ರೀರಾಮನು) ಪೃಥ್ವಿಗೆ ಸಮಾನನು' (ವಾ. ರಾ. ೧. ೧. ೧೮).

೪೪೩. **ಕ್ಷಾಮಃ**—ಸರ್ವವಿಕಾರಗಳು ನಾಶವಾಗಿ ಹೋದಮೇಲೆ ಸ್ವಾತ್ಮಭಾವದಿಂದ ಅವಸ್ಥಿತನಾಗಿರುವವನು.

೪೪೪. **ಸಮೀಹನಃ**—ಸೃಷ್ಟ್ಯಾದಿಕಾರ್ಯಗಳಿಗೋಸ್ಕರ ಉಚಿತವಾಗಿ ಸಂಕಲ್ಪಿಸುವವನು.

೪೪೫. **ಯಜ್ಞಃ**—ಸರ್ವಯಜ್ಞಸ್ವರೂಪನಾಗಿರುವವನು.

ಅಥವಾ ಸಮಸ್ತದೇವತೆಗಳನ್ನು ಸಂತೋಷಪಡಿಸಲು ಯಜ್ಞರೂಪದಿಂದ ಪ್ರವರ್ತಿಸುವವನು.

'ಯಜ್ಞೋ ವೈ ವಿಷ್ಣುಃ' 'ಯಜ್ಞವು ವಿಷ್ಣುವೇ' (ತೈ. ಸಂ. ೧. ೭. ೪).

೪೪೬. **ಇಜ್ಯಃ**—ಯಜ್ಞಗಳ ಮೂಲಕ ಪೂಜಿಸಲ್ಪಡತಕ್ಕವನು.

'ಯೇ ಯಜಂತಿ ಮಖೈಃ ಪುಣ್ಯೈಃ .... ವಿಷ್ಣುಮೇವ ಯಜಂತಿ ತೇ' 'ಯಾರು ಪವಿತ್ರವಾದ ಯಜ್ಞಗಳ ಮೂಲಕ ದೇವತಾದಿಗಳನ್ನೂ ಪಿತೃಗಳನ್ನೂ ಪೂಜಿಸುತ್ತಾರೋ ಅವರು ಆತ್ಮದಿಂದ ಆತ್ಮನಾದ ವಿಷ್ಣುವನ್ನೇ ಪೂಜಿಸುತ್ತಾರೆ' (ಹರಿ. ೩. ೪೦. ೨೭).

೪೪೭. **ಮಹೇಜ್ಯಃ**-ಯಜ್ಞಗಳಮೂಲಕ (ಎಲ್ಲ ದೇವತೆಗಳಿಗಿಂತಲೂ) ಪ್ರಕೃಷ್ಟವಾಗಿ ಪೂಜಿಸಲ್ಪಡತಕ್ಕವನು.

ಯಜ್ಞಗಳ ಮೂಲಕ ಪೂಜಿಸಲ್ಪಡತಕ್ಕ ದೇವತೆಗಳೆಲ್ಲರಲ್ಲಿ ಭಗವಂತನೇ ಪ್ರಕೃಷ್ಟವಾಗಿ ಪೂಜಿಸಲ್ಪಡತಕ್ಕವನು ; ಏಕೆಂದರೆ ಭಗವಂತನು ಮೋಕ್ಷರೂಪವಾದ ಫಲವನ್ನು ಕೊಡುವವನು. ಆದುದರಿಂದ ಭಗವಂತನಿಗೆ ಮಹೇಜ್ಯ ಎಂದು ಹೆಸರು.

೪೪೮. **ಕ್ರತುಃ**—ಯೂಪಸಹಿತವಾದ ಯಜ್ಞವಾಗಿರುವವನು.

ಯೂಪಸಹಿತವಾದ ಯಜ್ಞಕ್ಕೆ ಕ್ರತು ಎಂದು ಹೇಳುತ್ತಾರೆ. ಭಗವಂತನೇ ಆ ಯಜ್ಞವಾಗಿರುವನಾದ್ದರಿಂದ ಅವನಿಗೂ ಕ್ರತು ಎಂದು ಹೆಸರು.

೪೪೯. **ಸತ್ರಮ್**—ಸತ್ಪುರುಷರನ್ನು ಕಾಪಾಡುವವನು.

೪೫೦. **ಸತಾಂ ಗತಿಃ**—ಮುಮುಕ್ಷುಗಳಿಗೆ ಗತಿಯಾಗಿರುವವನು.

ಮುಮುಕ್ಷುಗಳಿಗೆ ಭಗವಂತನು ಹೊರತು ಅನ್ಯ ಯಾವ ಗತಿಯೂ ಇಲ್ಲ. ಆದುದರಿಂದ ಭಗವಂತನಿಗೆ ಸತಾಂ ಗತಿ ಎಂದು ಹೇಳುತ್ತಾರೆ.

೪೫೧. **ಸರ್ವದರ್ಶೀ**—ಸರ್ವಪ್ರಾಣಿಗಳ ಕೃತಾಕೃತಕರ್ಮಗಳನ್ನೆಲ್ಲ ತನ್ನ ಸ್ವಾಭಾವಿಕಜ್ಞಾನದಿಂದ ನೋಡುವವನು.

೪೫೨. **ವಿಮುಕ್ತಾತ್ಮಾ**-ಸ್ವಭಾವತಃ ಮುಕ್ತವಾಗಿರುವ ಆತ್ಮವುಳ್ಳವನು.

ಅಥವಾ ವಿಮುಕ್ತನೂ ಆತ್ಮನೂ ಆಗಿರುವವನು.

೪೫೩. **ಸರ್ವಜ್ಞಃ**—ಎಲ್ಲವೂ ಜ್ಞಾತೃವೂ ಆಗಿರುವವನು.

'ಇದಂ ಸರ್ವಂ ಯದಯಮಾತ್ಮಾ' 'ಇದೆಲ್ಲವೂ ಈ ಆತ್ಮನೇ' (ಬೃ. ಉ. ೨. ೪. ೬).

೪೫೪. **ಜ್ಞಾನಮುತ್ತಮಮ್**–ಉತ್ತಮವಾದ ಜ್ಞಾನವಾಗಿರುವವನು.

ಪ್ರಕೃಷ್ಟವೂ ಅಜನ್ಯವೂ ಅನವಚ್ಛಿನ್ನವೂ ಮತ್ತು ಸರ್ವವನ್ನು ಸಾಧಿಸುವಂತಹ ಶ್ರೇಷ್ಠಸಾಧನವೂ ಆಗಿರುವ ಜ್ಞಾನವೇ ಉತ್ತಮವಾದ ಜ್ಞಾನವು. ಇದು ಬ್ರಹ್ಮವೇ ಆಗಿರುವುದು.

'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಬ್ರಹ್ಮವು ಸತ್ಯವೂ ಜ್ಞಾನವೂ ಅನಂತವೂ (ಆಗಿದೆ)' (ತೈ. ಉ. ೨. ೧).

೪೫೫. **ಸುವ್ರತಃ**—ಶುಭವಾದ ವ್ರತವುಳ್ಳವನು.

'ಸಕೃದೇವ ಪ್ರಪನ್ನಾಯ....ದದಾಮ್ಯೇತದ್ ವ್ರತಂ ಮಮ' 'ಯಾವನು ಒಂದುಬಾರಿಯಾದರೂ ನನ್ನನ್ನು ಶರಣುಹೋಗುತ್ತಾನೋ ಮತ್ತು "ನಾನು ನಿನ್ನವನು" ಎಂದು ನನ್ನನ್ನು ಯಾಚಿಸುತ್ತಾನೋ ಅವನಿಗೆ ಸರ್ವಪ್ರಾಣಿಗಳಿಂದ ಅಭಯವನ್ನು ಕೊಡುತ್ತೇನೆ. ಇದು ನನ್ನ ವ್ರತವು' (ವಾ. ರಾ. ೬. ೧೮. ೩೩).

೪೫೬. **ಸುಮುಖಃ**—ಸುಂದರವಾದ ಮುಖವುಳ್ಳವನು.

ಅಥವಾ ಭಗವಂತನು ಸರ್ವವಿದ್ಯೆಗಳನ್ನು ಉಪದೇಶಿಸಿದವನಾದ್ದರಿಂದ ಸುಮುಖನು.

'ಪ್ರಸನ್ನವದನಂ ಚಾರುಪದ್ಮಪತ್ರಾಯತೇಕ್ಷಣಮ್' '(ವಿಷ್ಣುವು) ಪ್ರಸನ್ನವದನನೂ ಸುಂದರವಾದ ಪದ್ಮಪತ್ರಗಳಂತೆ ವಿಶಾಲವಾದ ಕಣ್ಣುಗಳುಳ್ಳವನೂ (ಆಗಿರುವನು)' (ವಿಷ್ಣು. ೬. ೭. ೮೦). 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' 'ಯಾವನು (ಭಗವಂತನು) ಮೊದಲು ಬ್ರಹ್ಮನನ್ನು ಹುಟ್ಟಿಸಿದನೋ ಮತ್ತು ಯಾವನು ಅವನಿಗೆ ವೇದಗಳನ್ನು ಉಪದೇಶಿಸಿದನೋ' (ಶ್ವೇ. ಉ. ೬. ೧೮).

೪೫೭. **ಸೂಕ್ಷ್ಮಃ**—ಶಬ್ದಾದಿಸ್ಥೂಲಕಾರಣಗಳಿಲ್ಲದವನು.

'ಸರ್ವಗತಂ ಸುಸೂಕ್ಷ್ಮಮ್' '(ಬ್ರಹ್ಮವು) ಸರ್ವಗತವೂ (ಸರ್ವವ್ಯಾಪಿಯೂ) ಅತಿಸೂಕ್ಷ್ಮವೂ (ಆಗಿದೆ)' (ಮುಂ. ಉ. ೧. ೧. ೬).

೪೫೮. **ಸುಘೋಷಃ** — ಪವಿತ್ರವಾದ ವೇದರೂಪವಾದ ಘೋಷವುಳ್ಳವನು.

ಅಥವಾ ಮೇಘದಂತೆ ಗಂಭೀರವಾದ ಘೋಷವುಳ್ಳವನಾದುದರಿಂದ ಭಗವಂತನು ಸುಘೋಷನು.

೪೫೯. **ಸುಖದಃ**—ಸದಾಚಾರಿಗಳಿಗೆ ಸುಖವನ್ನು ಕೊಡುವವನು.

ಅಥವಾ ದುರಾಚಾರಿಗಳ ಸುಖವನ್ನು ನಾಶಮಾಡುವವನು. ಆದುದರಿಂದ ಭಗವಂತನಿಗೆ ಸುಖದ ಎಂದು ಹೆಸರು.

೪೬೦. **ಸುಹೃತ್**—ಪ್ರತ್ಯುಪಕಾರವನ್ನು ಅಪೇಕ್ಷಿಸದೆ ಉಪಕಾರವನ್ನು ಮಾಡುವವನು.

೪೬೧. **ಮನೋಹರಃ**—ನಿರತಿಶಯಾನಂದರೂಪನು.

'ಯೋ ವೈ ಭೂಮಾ ತತ್ ಸುಖಂ ನಾಲ್ಪೇ ಸುಖಮಸ್ತಿ' 'ಯಾವುದು ನಿರತಿಶಯವಾದುದೋ ಅದೇ ಸುಖವು; ಅಲ್ಪದಲ್ಲಿ ಸುಖವಿಲ್ಲ' (ಛಾ.ಉ. ೭.೨೩.೧)

೪೬೨. **ಜಿತಕ್ರೋಧಃ**—ಕ್ರೋಧವನ್ನು ಜಯಿಸಿದವನು.

ಭಗವಂತನು ವೇದಮರ್ಯಾದೆಯನ್ನು ಸ್ಥಾಪಿಸುವುದಕ್ಕೋಸ್ಕರ ದೇವಶತ್ರುಗಳನ್ನು ಕೊಲ್ಲುತ್ತಾನೆಯೇ ಹೊರತು ಕೋಪವಶದಿಂದ ಕೊಲ್ಲುವುದಿಲ್ಲ.

೪೬೩. **ವೀರಬಾಹುಃ**—ಪರಾಕ್ರಮಶಾಲಿಗಳಾದ ಬಾಹುಗಳುಳ್ಳವನು.

ಭಗವಂತನು ಅಸುರರನ್ನು ಸಂಹರಿಸಿ ವೇದಮರ್ಯಾದೆಯನ್ನು ಸ್ಥಾಪಿಸುವ ಪರಾಕ್ರಮಶಾಲಿಯಾದ ಬಾಹುಗಳುಳ್ಳವನು. ಆದುದರಿಂದ ಅವನು ವೀರಬಾಹು.

೪೬೪. **ವಿದಾರಣಃ**—ಅಧಾರ್ಮಿಕರನ್ನು ಸೀಳಿಬಿಡುವವನು.

೪೬೫. **ಸ್ವಾಪನಃ**—ಪ್ರಾಣಿಗಳನ್ನು ನಿದ್ರಿಸುವಂತೆ ಮಾಡುವವನು.

ಅಂದರೆ ತನ್ನ ಮಾಯೆಯಿಂದ ಪ್ರಾಣಿಗಳನ್ನು ಆತ್ಮಜ್ಞಾನರಹಿತರನ್ನಾಗಿ ಮಾಡುವವನು.

೪೬೬. **ಸ್ವವಶಃ**—ಸ್ವತಂತ್ರನಾಗಿರುವವನು.

ಭಗವಂತನು ಜಗದುತ್ಪತ್ತಿಸ್ಥಿತಿಲಯಗಳಿಗೆ ಹೇತುವಾಗಿರುವನಾದುದರಿಂದ ಸ್ವತಂತ್ರನಾಗಿರುವನು. ಆದುದರಿಂದ ಅವನಿಗೆ ಸ್ವವಶ ಎಂದು ಹೆಸರು.

೪೬೭. **ವ್ಯಾಪೀ**—ಆಕಾಶದಂತೆ ಸರ್ವವ್ಯಾಪಿಯಾಗಿರುವವನು.

ಅಥವಾ ಕಾರಣರೂಪದಿಂದ ಸರ್ವಕಾರ್ಯಗಳನ್ನು ವ್ಯಾಪಿಸುವವನಾದುದರಿಂದ ಭಗವಂತನಿಗೆ ವ್ಯಾಪೀ ಎಂದು ಹೆಸರು.

೪೬೮. **ನೈಕಾತ್ಮಾ**—ಅನೇಕ ವಿಧವಾಗಿ ಇರುವವನು.

ಭಗವಂತನು ಜಗತ್‌ಸೃಷ್ಟಿ ಮೊದಲಾದುವುಗಳಲ್ಲಿ ಆವಿರ್ಭೂತವಾಗಿರುವ ನಿಮಿತ್ತಶಕ್ತಿಗಳೆಂಬ ವಿಭೂತಿಗಳಿಂದ ಅನೇಕ ವಿಧವಾಗಿ ಇರುತ್ತಾನೆ.

೪೬೯. **ನೈಕಕರ್ಮಕೃತ್**—ಜಗತ್ತಿನ ಉತ್ಪತ್ತಿ ಅಭಿವೃದ್ಧಿ ಮತ್ತು ನಾಶ—ಇವೇ ಮೊದಲಾದ ಕರ್ಮಗಳನ್ನು ಮಾಡುವವನು.

೪೭೦. **ವತ್ಸರಃ**—ಸಕಲವಸ್ತುಗಳಿಗೆ ವಾಸಸ್ಥಾನವಾಗಿರುವವನು.

೪೭೧. **ವತ್ಸಲಃ**—ಭಕ್ತರಲ್ಲಿ ಸ್ನೇಹವುಳ್ಳವನು.

೪೭೨. ವತ್ಸೀ—(ಗೋಪಾಲನಾಗಿ) ಕರುಗಳನ್ನು ಪಾಲಿಸಿದವನು.

ಅಥವಾ ಭಗವಂತನು ಜಗತ್ತಿಗೆ ಪಿತನು; ಪ್ರಜೆಗಳೆಲ್ಲ ಅವನ ಮಕ್ಕಳು. ಆದುದರಿಂದ ಭಗವಂತನು ವತ್ಸೀ.

೪೭೩. ರತ್ನಗರ್ಭಃ—ರತ್ನರೂಪವಾದ ಗರ್ಭವಿರುವ ಸಮುದ್ರವಾಗಿರುವವನು.

ರತ್ನಗಳೆಲ್ಲ ಯಾವನ ಗರ್ಭವಾಗಿರುವುವೋ ಆ ಸಮುದ್ರವು ಭಗವಂತನ ಒಂದು ವಿಭೂತಿಯಾಗಿರುವುದು. ಆದುದರಿಂದ ಭಗವಂತನಿಗೆ ರತ್ನಗರ್ಭ ಎಂದು ಹೆಸರು.

೪೭೪. ಧನೇಶ್ವರಃ—ಸರ್ವಸಂಪತ್ತುಗಳಿಗೆ ಒಡೆಯನಾಗಿರುವವನು.

೪೭೫. ಧರ್ಮಗುಪ್—ಧರ್ಮವನ್ನು ರಕ್ಷಿಸುವವನು.

'ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ' 'ಧರ್ಮಸ್ಥಾಪನೆಗೋಸ್ಕರ ಪ್ರತಿಯುಗದಲ್ಲೂ ಹುಟ್ಟುತ್ತೇನೆ' (ಗೀತಾ. ೪. ೮).

೪೭೬. ಧರ್ಮಕೃತ್—ಧರ್ಮವನ್ನು ಆಚರಿಸುವವನು.

ಭಗವಂತನು ಧರ್ಮಾಧರ್ಮಹೀನನಾದರೂ ಧರ್ಮದ ಮರ್ಯಾದೆಯನ್ನು ಸ್ಥಾಪಿಸುವುದಕ್ಕಾಗಿ ಧರ್ಮವನ್ನೇ ಆಚರಿಸುತ್ತಾನೆ. ಆದುದರಿಂದ ಅವನಿಗೆ ಧರ್ಮಕೃತ್ ಎಂದು ಹೆಸರು.

೪೭೭. ಧರ್ಮೀ—ಧರ್ಮಗಳಿಗೆಲ್ಲ ಆಧಾರವಾಗಿರುವವನು.

೪೭೮. ಸತ್—ಸತ್ಯವಾಗಿರುವ ಪರಬ್ರಹ್ಮವಾಗಿರುವವನು.

'ಸದೇವ ಸೋಮ್ಯೇದಮ್' 'ಎಲೈ ಸೋಮ್ಯನೆ, (ಸೃಷ್ಟಿಗೆ ಮೊದಲು) ಇದು (ಜಗತ್ತು) ಸತ್ ಸ್ವರೂಪವೇ' (ಛಾ. ಉ. ೬. ೨. ೧).

೪೭೯. ಅಸತ್—ಅಪರಬ್ರಹ್ಮವಾಗಿರುವವನು.

ಪ್ರಪಂಚರೂಪದಿಂದಿರುವ ಬ್ರಹ್ಮಕ್ಕೆ ಅಪರಬ್ರಹ್ಮ ಎಂದು ಹೇಳುತ್ತಾರೆ.

೪೮೦. ಕ್ಷರಮ್—ಸರ್ವಭೂತಗಳಾಗಿರುವವನು.

೪೮೧. ಅಕ್ಷರಮ್—ಕೂಟಸ್ಥನಾಗಿರುವವನು.

'ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋऽಕ್ಷರ ಉಚ್ಯತೇ' 'ಕ್ಷರ ಎಂದರೆ ಸರ್ವಭೂತಗಳು. ಕೂಟಸ್ಥನು ಅಕ್ಷರನು ಎಂದು ಹೇಳಲ್ಪಡುತ್ತಾನೆ' (ಗೀತಾ. ೧೫. ೧೬).

೪೮೨. ಅವಿಜ್ಞಾತಾ—ವಿಕಲ್ಪಜ್ಞಾನರಹಿತನಾಗಿರುವವನು.

ಆತ್ಮನಲ್ಲಿ ಕರ್ತೃತ್ವಾದಿ ವಿಕಲ್ಪಜ್ಞಾನವು ಕಲ್ಪಿತವಾದುದಾಗಿರುವುದು. ಆದುದರಿಂದ ಅದರ ವಾಸನೆಯಿಂದ ಅವಗುಂಠಿತನಾದ ಜೀವನು ವಿಜ್ಞಾತೃವೆಂದು ಹೇಳಲ್ಪಡುತ್ತಾನೆ. ವಿಷ್ಣುವು ವಿಕಲ್ಪಜ್ಞಾನರಹಿತನಾದುದರಿಂದ ಅವಿಜ್ಞಾತೃವು.

**೪೮೩. ಸಹಸ್ರಾಂಶುಃ**—ಸೂರ್ಯನಾಗಿರುವವನು.

ಸೂರ್ಯ ಮೊದಲಾದವರಲ್ಲಿ ಇರುವ ಕಿರಣಗಳೆಲ್ಲ ವಾಸ್ತವವಾಗಿ ಭಗವಂತನ ಕಿರಣಗಳಾದ್ದರಿಂದ ಭಗವಂತನೇ ಮುಖ್ಯನಾದ ಸಹಸ್ರಾಂಶುವು.

'ಯೇನ ಸೂರ್ಯಸ್ತಪತಿ ತೇಜಸೇದ್ಧಃ' '(ಭಗವಂತನ) ತೇಜಸ್ಸಿನಿಂದ ಪ್ರಜ್ವಲಿತನಾಗಿ ಸೂರ್ಯನು ತಪಿಸುತ್ತಾನೆ (ಪ್ರಕಾಶಿಸುತ್ತಾನೆ)' (ತೈ. ಬ್ರಾ. ೧೨. ೭೯. ೭). 'ಯದಾದಿತ್ಯಗತಂ ತೇಜಃ' 'ಸೂರ್ಯನಲ್ಲಿ ಯಾವ ತೇಜಸ್ಸು ಉಂಟೋ (ಅದು ನನ್ನದೆಂದು ತಿಳಿ)' (ಗೀತಾ. ೧೫. ೧೨).

**೪೮೪. ವಿಧಾತಾ**—ವಿಶೇಷವಾಗಿ ಆಧಾರವಾಗಿರುವವನು.

ಸಮಸ್ತ ಭೂತಗಳಿಗೆ ಆಧಾರವಾಗಿರುವ ಶೇಷದಿಗ್ಗಜಗಳು ಮತ್ತು ಪರ್ವತಗಳು–ಇವುಗಳಿಗೆ ಭಗವಂತನು ವಿಶೇಷವಾಗಿ ಆಧಾರವಾಗಿರುವನು.

**೪೮೫. ಕೃತಲಕ್ಷಣಃ**—ನಿತ್ಯಸಿದ್ಧಚೈತನ್ಯಸ್ವರೂಪನು.

ಅಥವಾ ಭಗವಂತನು ಶಾಸ್ತ್ರಗಳನ್ನು ರಚಿಸಿದವನಾದುದರಿಂದ ಅವನಿಗೆ ಕೃತಲಕ್ಷಣ ಎಂದು ಹೆಸರು.

'ವೇದಾಃ ಶಾಸ್ತ್ರಾಣಿ ವಿಜ್ಞಾನಮೇತತ್ ಸರ್ವಂ ಜನಾರ್ದನಾತ್' 'ವೇದಗಳು ಶಾಸ್ತ್ರಗಳು ಮತ್ತು ವಿಜ್ಞಾನ—ಇವೆಲ್ಲವೂ ಜನಾರ್ದನನಿಂದ ಉಂಟಾಗಿವೆ.' (ವಿಷ್ಣು. ಸ.).

**೪೮೬. ಗಭಸ್ತಿನೇಮಿಃ**—ಕಿರಣಮಂಡಲದ ಮಧ್ಯದಲ್ಲಿ ಸೂರ್ಯರೂಪದಿಂದಿರುವವನು.

**೪೮೭. ಸತ್ತ್ವಸ್ಥಃ** — ಪ್ರಕಾಶವನ್ನು ಬೀರುವ ಸತ್ತ್ವಗುಣವನ್ನು ಪ್ರಧಾನವಾಗಿ ಅವಲಂಬಿಸಿರುವವನು.

ಅಥವಾ ಸಮಸ್ತಪ್ರಾಣಿಗಳಲ್ಲಿ ಅವಸ್ಥಿತನಾಗಿರುವವನು.

**೪೮೮. ಸಿಂಹಃ**—ಸಿಂಹದಂತೆ ಪರಾಕ್ರಮಶಾಲಿಯಾಗಿರುವವನು.

**೪೮೯. ಭೂತಮಹೇಶ್ವರಃ**—ಭೂತಗಳಿಗೆ ಮಹಾನ್ ಈಶ್ವರನಾಗಿರುವವನು.

ಅಥವಾ ನಿಜವಾಗಿ ವಿಷ್ಣುವೇ ಅತ್ಯಂತ ಶ್ರೇಷ್ಠನಾದ ಈಶ್ವರನಾಗಿರುವನಾದುದರಿಂದ ಅವನಿಗೆ ಭೂತಮಹೇಶ್ವರ ಎಂದು ಹೆಸರು.

**೪೯೦. ಆದಿದೇವಃ**—ಸರ್ವಭೂತಗಳಿಗೆ ಆದಿಯೂ ದೇವನೂ ಆಗಿರುವವನು.

**೪೯೧. ಮಹಾದೇವಃ**—ಸಕಲಭಾವಗಳನ್ನು ತ್ಯಜಿಸಿ ಆತ್ಮಜ್ಞಾನಯೋಗೈಶ್ವರ್ಯದಿಂದ ಮಹಿಮಾನ್ವಿತನಾಗಿರುವವನು.

೪೯೨. **ದೇವೇಶಃ**—ದೇವತೆಗಳಿಗೆ ಸ್ವಾಮಿಯಾಗಿರುವವನು.

ಭಗವಂತನು ದೇವತೆಗಳಲ್ಲೆಲ್ಲ ಪ್ರಧಾನನಾದುದರಿಂದ ಅವರಿಗೆಲ್ಲ ಸ್ವಾಮಿಯಾಗಿರುವನು.

೪೯೩. **ದೇವಭೃದ್‌ಗುರುಃ**—ದೇವತೆಗಳನ್ನೆಲ್ಲ ಪಾಲಿಸುವ ಇಂದ್ರನಿಗೂ ಗುರುವೆನ್ನಿಸಿದವನು.

ಅಥವಾ ಭಗವಂತನು ದೇವತೆಗಳನ್ನೆಲ್ಲ ಪೋಷಿಸುವವನೂ, ಸರ್ವವಿದ್ಯೆಗಳ ವಕ್ತೃವೂ ಆಗಿರುವನಾದುದರಿಂದ ಅವನಿಗೆ ದೇವಭೃದ್‌ಗುರು ಎಂದು ಹೆಸರು.

೪೯೪. **ಉತ್ತರಃ**—ಸಂಸಾರಬಂಧನದಿಂದ ಪಾರುಮಾಡುವವನು.

ಅಥವಾ ಸರ್ವೋತ್ಕೃಷ್ಟನು.

'ವಿಶ್ವಸ್ಮಾದಿಂದ್ರ ಉತ್ತರಃ' 'ಇಂದ್ರನು (ಭಗವಂತನು) ಎಲ್ಲಕ್ಕಿಂತ ಶ್ರೇಷ್ಠನು' (ಶ್ರುತಿ).

೪೯೫. **ಗೋಪತಿಃ**—ಗೋವುಗಳನ್ನು ಪಾಲಿಸಿದವನು.

ಗೋಪವೇಷಧಾರಿಯಾಗಿ ಗೋವುಗಳನ್ನು ಪಾಲಿಸಿದವನಾದುದರಿಂದ ಶ್ರೀಕೃಷ್ಣನಿಗೆ ಗೋಪತಿ ಎಂದು ಹೆಸರು. ಅಥವಾ ಪೃಥ್ವಿಗೆ ಒಡೆಯನಾದುದರಿಂದ ಭಗವಂತನಿಗೆ ಗೋಪತಿ ಎಂದು ಹೆಸರು.

೪೯೬. **ಗೋಪ್ತಾ**—ಜಗದ್ರಕ್ಷಕನು.

ಭಗವಂತನು ಸಮಸ್ತಭೂತಗಳನ್ನು ಪಾಲಿಸುವ ಜಗದ್ರಕ್ಷಕನಾದುದರಿಂದ ಅವನಿಗೆ ಗೋಪ್ತಾ ಎಂದು ಹೆಸರು.

೪೯೭. **ಜ್ಞಾನಗಮ್ಯಃ**—ಜ್ಞಾನದಿಂದ ತಿಳಿಯಲ್ಪಡುವವನು.

ಭಗವಂತನು ಕರ್ಮದಿಂದಾಗಲಿ, ಜ್ಞಾನಕರ್ಮಗಳ ಸಮುಚ್ಚಯದಿಂದಾಗಲಿ ತಿಳಿಯಲ್ಪಡುವವನಲ್ಲ; ಕೇವಲ ಜ್ಞಾನವೊಂದರಿಂದಲೇ ತಿಳಿಯಲ್ಪಡುವವನು. ಆದುದರಿಂದ ಅವನು ಜ್ಞಾನಗಮ್ಯನು.

೪೯೮. **ಪುರಾತನಃ**—ಪುರಾತನಕಾಲದಿಂದಲೂ ಇರುವವನು.

ಕಾಲದಿಂದ ಅಪರಿಚ್ಛಿನ್ನನಾದುದರಿಂದ ಭಗವಂತನು ಪುರಾತನಕಾಲದಿಂದಲೂ ಇದ್ದಾನೆ. ಆದುದರಿಂದ ಅವನಿಗೆ ಪುರಾತನ ಎಂದು ಹೆಸರು.

೪೯೯. **ಶರೀರಭೃತ್**—ಶರೀರಕ್ಕೆ ಆಧಾರವಾಗಿರುವವನು.

ಶರೀರಾರಂಭಕ್ಕೆ ಕಾರಣವಾದ ಭೂತಗಳಿಗೆ ಆಧಾರವಾಗಿರುವವನಾದ್ದರಿಂದ ಪ್ರಾಣರೂಪಧರನಾದ ಭಗವಂತನಿಗೆ ಶರೀರಭೃತ್ ಎಂದು ಹೆಸರು.

೫೦೦. **ಭೋಕ್ತಾ**—ಜಗತ್ಪಾಲಕನಾಗಿರುವವನು.

ಅಥವಾ ಪರಮಾನಂದವನ್ನು ಸಮಗ್ರವಾಗಿ ಭೋಗಿಸುವವನು.

೫೦೧. **ಕಪೀಂದ್ರಃ**—ವರಾಹರೂಪವನ್ನು ಧರಿಸಿದವನು.

ಅಥವಾ ಕಪಿಗಳಿಗೆಲ್ಲ ಒಡೆಯನಾದ ಶ್ರೀರಾಘವನು.

೫೦೨. **ಭೂರಿದಕ್ಷಿಣಃ**—ಅನೇಕ ದಕ್ಷಿಣೆಗಳಿರುವವನು.

ಧರ್ಮಮರ್ಯಾದೆಯನ್ನು ತೋರಿಸುತ್ತ ಯಜ್ಞವನ್ನು ಮಾಡುತ್ತಿರುವ ಭಗವಂತನಿಗೆ ಅನೇಕ ಯಜ್ಞದಕ್ಷಿಣೆಗಳಿವೆ. ಆದುದರಿಂದ ಅವನಿಗೆ ಭೂರಿದಕ್ಷಿಣ ಎಂದು ಹೆಸರು.

೫೦೩. **ಸೋಮಪಃ**—ಸೋಮರಸವನ್ನು ಪಾನಮಾಡುವವನು.

ಭಗವಂತನು ಸಕಲಯಜ್ಞಗಳಲ್ಲಿ ಪೂಜಿಸಲ್ಪಡುವ ದೇವತಾರೂಪದಿಂದ ಸೋಮರಸವನ್ನು ಪಾನಮಾಡುತ್ತಾನೆ. ಆದುದರಿಂದ ಅವನಿಗೆ ಸೋಮಪ ಎಂದು ಹೆಸರು. ಅಥವಾ ಭಗವಂತನು ಯಜಮಾನರೂಪದಿಂದ (ಯಜ್ಞಮಾಡುವವನ ರೂಪದಿಂದ) ಧರ್ಮಮರ್ಯಾದೆಯನ್ನು ತೋರಿಸುತ್ತ ಸೋಮರಸವನ್ನು ಪಾನ ಮಾಡುತ್ತಾನೆ. ಆದುದರಿಂದ ಅವನಿಗೆ ಸೋಮಪ ಎಂದು ಹೆಸರು.

೫೦೪. **ಅಮೃತಪಃ**—ಆತ್ಮರೂಪವಾದ ಅಮೃತವನ್ನು ಪಾನಮಾಡುವವನು.

ಅಥವಾ ಭಗವಂತನು ಅಸುರರಿಂದ ವಶಪಡಿಸಿಕೊಂಡ ಅಮೃತವನ್ನು ರಕ್ಷಿಸಿ ಮತ್ತು ಅದನ್ನು ದೇವತೆಗಳಿಗೆಲ್ಲ ಕುಡಿಸಿ ತಾನೂ ಕುಡಿದನು. ಆದುದರಿಂದ ಅವನಿಗೆ ಅಮೃತಪ ಎಂದು ಹೆಸರು.

೫೦೫. **ಸೋಮಃ**—ಚಂದ್ರರೂಪದಿಂದ ಔಷಧಿಗಳನ್ನು (ಸಸ್ಯಗಳನ್ನು) ಪೋಷಿಸುವವನು.

ಅಥವಾ ಉಮೆಯೊಂದಿಗೆ ಒಡಗೂಡಿ ಇರುವ ಶಿವನು.

೫೦೬. **ಪುರುಜಿತ್**—ಅನೇಕರನ್ನು ಜಯಿಸಿದವನು.

೫೦೭. **ಪುರುಸತ್ತಮಃ**- ವಿಶ್ವರೂಪವನ್ನು ಧರಿಸಿದವನೂ ಉತ್ಕೃಷ್ಟನೂ ಆಗಿರುವವನು.

ಭಗವಂತನು ವಿಶ್ವರೂಪವನ್ನು ಧರಿಸಿದವನಾದುದರಿಂದ ಪುರು ಆಗಿರುವನು ಮತ್ತು ಉತ್ಕೃಷ್ಟನಾದುದರಿಂದ ಸತ್ತಮನು. ಪುರುವೂ ಸತ್ತಮನೂ ಆದುದರಿಂದ ಭಗವಂತನು ಪುರುಸತ್ತಮನು.

೫೦೮. **ವಿನಯಃ**—ದುಷ್ಟರನ್ನು ಶಿಕ್ಷಿಸುವವನು.

೫೦೯. **ಜಯಃ**—ಸಮಸ್ತಭೂತಗಳನ್ನು ಜಯಿಸುವವನು.

೫೧೦. **ಸತ್ಯಸಂಧಃ**—ಸತ್ಯಸಂಕಲ್ಪನಾಗಿರುವವನು.

೫೧೧. **ದಾಶಾರ್ಹಃ**—ದಾನವನ್ನು ಸ್ವೀಕರಿಸಲು ಯೋಗ್ಯನಾಗಿರುವವನು.

ಅಥವಾ ದಶಾರ್ಹಕುಲದಲ್ಲಿ ಶ್ರೀಕೃಷ್ಣನಾಗಿ ಹುಟ್ಟಿದವನು.

**೫೧೨. ಸಾತ್ವತಾಂ ಪತಿಃ**—ಸಾತ್ವತವಂಶದ ಯಾದವರಿಗೆ ಅಥವಾ ವೈಷ್ಣವರಿಗೆ ಸ್ವಾಮಿಯಾಗಿರುವವನು.

ಅಥವಾ ಸಾತ್ವತ ಎಂಬ ಹೆಸರಿನ ತಂತ್ರಗಳನ್ನು ಅನುಸರಿಸುವ ಭಾಗವತರ ಯೋಗಕ್ಷೇಮವನ್ನು ನೋಡಿಕೊಳ್ಳುವವನು.

**೫೧೩. ಜೀವಃ**—ಕ್ಷೇತ್ರಜ್ಞರೂಪದಿಂದ ಪ್ರಾಣಗಳನ್ನು ಧರಿಸುವವನು.

**೫೧೪. ವಿನಯಿತಾಸಾಕ್ಷೀ**—ಪ್ರಜೆಗಳ ವಿನಯಭಾವವನ್ನು ಸಾಕ್ಷಾತ್ ನೋಡುವವನು.

ಅಥವಾ ತನಗೆ ಅತಿರಿಕ್ತವಾಗಿ ಏನನ್ನೂ ಕಾಣದವನು (ಅಂದರೆ ತನಗೆ ಅರಿತಿಕ್ತವಾದುದು ಏನೂ ಇಲ್ಲದವನು).

**೫೧೫. ಮುಕುಂದಃ**—ಮುಕ್ತಿಯನ್ನು ಕೊಡುವವನು.

**೫೧೬. ಅಮಿತವಿಕ್ರಮಃ**—ಅಪರಿಚ್ಛಿನ್ನಗಳಾದ ಹೆಜ್ಜೆಗಳುಳ್ಳವನು.

(ವಾಮನಾವತಾರದಲ್ಲಿ) ಭಗವಂತನ ಮೂರು ಹೆಜ್ಜೆಗಳು ಅಪರಿಚ್ಛಿನ್ನವಾದುವುಗಳಾಗಿದ್ದುವು. ಆದುದರಿಂದ ಅವನಿಗೆ ಅಮಿತವಿಕ್ರಮ ಎಂದು ಹೆಸರು. ಅಥವಾ ಅಪರಿಮಿತವಾದ ಶೌರ್ಯವುಳ್ಳವನಾದುದರಿಂದ ಭಗವಂತನು ಅಮಿತವಿಕ್ರಮನು.

**೫೧೭. ಅಂಭೋನಿಧಿಃ**—ದೇವತೆಗಳು ಮನುಷ್ಯರು ಪಿತೃಗಳು ಮತ್ತು ಅಸುರರು—ಇವರಿಗೆ ನಿವಾಸಸ್ಥಾನವಾಗಿರುವವನು.

ಅಥವಾ ಅಂಭೋನಿಧಿ ಎಂದರೆ ಸಾಗರ. ಭಗವಂತನು ಸರೋವರಗಳಲ್ಲಿ ಸಾಗರವಾಗಿರುವನಾದುದರಿಂದ ಅವನಿಗೆ ಅಂಭೋನಿಧಿ ಎಂದು ಹೆಸರು.

'ಸರಸಾಮಸ್ಮಿ ಸಾಗರಃ' 'ಸರೋವರಗಳಲ್ಲಿ ನಾನು ಸಾಗರನು' (ಗೀತಾ. ೧೦. ೨೪).

**೫೧೮. ಅನಂತಾತ್ಮಾ**—ದೇಶತಃ ಕಾಲತಃ ಮತ್ತು ವಸ್ತುತಃ ಅಪರಿಚ್ಛಿನ್ನನಾಗಿರುವವನು.

**೫೧೯. ಮಹೋದಧಿಶಯಃ** — ಮಹಾಸಾಗರದಲ್ಲಿ ಶಯನಮಾಡುವವನು.

ಭಗವಂತನು ಸರ್ವಭೂತಗಳನ್ನು ಸಂಹರಿಸಿ ಇಡೀ ಜಗತ್ತನ್ನು ಜಲಮಯವನ್ನಾಗಿ ಮಾಡಿ ಆ ಮಹಾಸಾಗರದಲ್ಲಿ ಶಯನಮಾಡುತ್ತಾನೆ.

**೫೨೦. ಅಂತಕಃ**—ಸಮಸ್ತಭೂತಗಳನ್ನು ಕೊನೆಗಾಣಿಸುವವನು.

**೫೨೧. ಅಜಃ**—ಹುಟ್ಟು ಇಲ್ಲದವನು.

**೫೨೨. ಮಹಾರ್ಹಃ**—ಪೂಜೆಗೆ ಯೋಗ್ಯನಾಗಿರುವವನು.

**೫೨೩. ಸ್ವಾಭಾವ್ಯಃ**—ಸ್ವಭಾವದಿಂದಲೇ ಹುಟ್ಟು ಇಲ್ಲದವನು.

ಭಗವಂತನು ನಿತ್ಯಸಿದ್ಧರೂಪನಾದುದರಿಂದ ಸ್ವಭಾವದಿಂದಲೇ ಹುಟ್ಟು ಇಲ್ಲದವನು. ಆದುದರಿಂದ ಅವನಿಗೆ ಸ್ವಾಭಾವ್ಯ ಎಂದು ಹೆಸರು.

**೫೨೪. ಜಿತಾಮಿತ್ರಃ**—ಆಂತರಿಕವೈರಿಗಳನ್ನೂ ಬಾಹ್ಯವೈರಿಗಳನ್ನೂ ಜಯಿಸಿದವನು.

ಭಗವಂತನು ರಾಗದ್ವೇಷಾದಿ ಅಂತರಿಕವೈರಿಗಳನ್ನೂ ರಾವಣ ಕುಂಭಕರ್ಣ ಶಿಶುಪಾಲ ಮೊದಲಾದ ಬಾಹ್ಯವೈರಿಗಳನ್ನೂ ಜಯಿಸಿರುವವನಾಗಿದ್ದಾನೆ.

**೫೨೫. ಪ್ರಮೋದನಃ**-ಸ್ವಾತ್ಮಾಮೃತವನ್ನು ಪಾನಮಾಡುತ್ತ ನಿತ್ಯವೂ ಆನಂದಪಡುವವನು.

ಅಥವಾ ಧ್ಯಾನಿಗಳಿಗೆ ಧ್ಯಾನಮಾತ್ರದಿಂದಲೇ ಆನಂದವನ್ನುಂಟುಮಾಡುವವನು.

**೫೨೬. ಆನಂದಃ**—ಆನಂದಸ್ವರೂಪನಾಗಿರುವವನು.

'ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' 'ಈ ಆನಂದದ ಒಂದು ಅಂಶಮಾತ್ರವನ್ನು ಅವಲಂಬಿಸಿಯೇ ಅನ್ಯಭೂತಗಳೆಲ್ಲ ಜೀವಿಸುತ್ತವೆ' (ಬೃ. ಉ. ೪. ೩. ೩೨).

**೫೨೭. ನಂದನಃ**—ಆನಂದಪಡಿಸುವವನು.

**೫೨೮. ನಂದಃ**—ಸರ್ವೋಪಪತ್ತಿಗಳಿಂದ (ಸರ್ವಸಿದ್ಧಿಗಳಿಂದ) ಸಮೃದ್ಧನಾಗಿರುವವನು. ಅಥವಾ,

ಅನಂದಃ—ಭಗವಂತನಲ್ಲಿ ವೈಷಯಿಕವಾದ ಆನಂದವು ಇಲ್ಲವಾದುದರಿಂದ ಅವನಿಗೆ ಅನಂದ ಎಂದು ಹೆಸರು.

**೫೨೯. ಸತ್ಯಧರ್ಮಾ**—ಸತ್ಯವಾಗಿರುವ ಧರ್ಮಗಳುಳ್ಳವನು.

ಜ್ಞಾನವೇ ಮೊದಲಾದ ಭಗವಂತನ ಧರ್ಮಗಳು ಸತ್ಯವಾದವುಗಳು. ಆದುದರಿಂದ ಭಗವಂತನಿಗೆ ಸತ್ಯಧರ್ಮಾ ಎಂದು ಹೆಸರು.

**೫೩೦. ತ್ರಿವಿಕ್ರಮಃ**—ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ವ್ಯಾಪಿಸಿದವನು.

ಭಗವಂತನು (ವಾಮನಾವತಾರದಲ್ಲಿ) ತನ್ನ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ವ್ಯಾಪಿಸಿದನು. ಆದುದರಿಂದ ಅವನಿಗೆ ತ್ರಿವಿಕ್ರಮ ಎಂದು ಹೆಸರು.

**೫೩೧. ಮಹರ್ಷಿಃ ಕಪಿಲಾಚಾರ್ಯಃ**—ಸಿದ್ಧಪುರುಷರಲ್ಲಿ ಮಹರ್ಷಿ ಕಪಿಲಾಚಾರ್ಯರಾಗಿರುವವನು.

ಕಪಿಲಮುನಿಗಳು ಇಡೀ ವೇದವನ್ನು ನೋಡಿದವರಾದುದರಿಂದ (ತಿಳಿದವರಾದುದರಿಂದ) ಮಹರ್ಷಿಗಳು. ಇತರರಾದರೋ ವೇದದ ಒಂದು ಅಂಶವನ್ನು ಮಾತ್ರ ನೋಡಿದವರಾದುದರಿಂದ ಕೇವಲ ಋಷಿಗಳು. ಕಪಿಲಮುನಿಗಳು ಸಾಂಖ್ಯವೆಂಬ ಶುದ್ಧ ತತ್ತ್ವಜ್ಞಾನದ ಆಚಾರ್ಯರೂ ಆಗಿರುವರು. ಆದುದರಿಂದ ಅವರಿಗೆ ಮಹರ್ಷಿ

ಕಪಿಲಾಚಾರ್ಯ ಎಂದು ಹೆಸರು. ಭಗವಂತನು ಸಿದ್ಧಪುರುಷರಲ್ಲಿ ಕಪಿಲಮುನಿಯಾಗಿರುವನಾದುದರಿಂದ ಅವನಿಗೂ ಮಹರ್ಷಿ ಕಪಿಲಾಚಾರ್ಯ ಎಂದು ಹೆಸರು.

'ಸಿದ್ಧಾನಾಂ ಕಪಿಲೋ ಮುನಿಃ' 'ಸಿದ್ಧಪುರುಷರಲ್ಲಿ ನಾನು ಕಪಿಲಮುನಿಯು' (ಗೀತಾ. ೧೦. ೨೬).

**೫೩೨. ಕೃತಜ್ಞಃ**—ಜಗತ್ತೂ ಆತ್ಮನೂ ಆಗಿರುವವನು.

ಭಗವಂತನು ಕಾರ್ಯರೂಪವಾಗಿರುವ ಜಗತ್ತೂ (ಕೃತಂ) ಆತ್ಮನೂ (ಜ್ಞ) ಆಗಿರುವನಾದುದರಿಂದ ಅವನಿಗೆ ಕೃತಜ್ಞ ಎಂದು ಹೆಸರು.

**೫೩೩. ಮೇದಿನೀಪತಿಃ**—ಭೂಮಿಗೆ ಒಡೆಯನಾಗಿರುವವನು.

**೫೩೪. ತ್ರಿಪದಃ**—ಮೂರು ಹೆಜ್ಜೆಗಳನ್ನು ಇಟ್ಟವನು.

'ತ್ರೀಣಿ ಪದಾ ವಿಚಕ್ರಮೇ' '(ಭಗವಂತನು) ಮೂರು ಹೆಜ್ಜೆಗಳಿಂದ (ಜಗತ್ತನ್ನು) ಅಳೆದನು' (ಶ್ರುತಿ).

**೫೩೫. ತ್ರಿದಶಾಧ್ಯಕ್ಷಃ**—ಜಾಗ್ರತ್ ಸ್ವಪ್ನ ಮತ್ತು ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೆ ಸಾಕ್ಷಿಯಾಗಿರುವವನು.

ಗುಣಾವೇಶದಿಂದ ಜಾಗ್ರತ್ ಸ್ವಪ್ನ ಮತ್ತು ಸುಷುಪ್ತಿ ಎಂಬ ಮೂರು ಅವಸ್ಥೆಗಳು ಹುಟ್ಟಿರುವುವು. ಭಗವಂತನು ಈ ಅವಸ್ಥೆಗಳಿಗೆ ಸಾಕ್ಷಿಯಾಗಿರುವನಾದುದರಿಂದ ಅವನಿಗೆ ತ್ರಿದಶಾಧ್ಯಕ್ಷ ಎಂದು ಹೆಸರು.

**೫೩೬. ಮಹಾಶೃಂಗಃ**—ದೊಡ್ಡದಾದ ಕೊಂಬನ್ನು ಧರಿಸಿದವನು.

ಭಗವಂತನು ಮತ್ಸ್ಯರೂಪಿಯಾಗಿ ತನ್ನ ದೊಡ್ಡದಾದ ಕೊಂಬಿಗೆ ನಾವೆಯನ್ನು ಕಟ್ಟಿ ಪ್ರಲಯಸಮುದ್ರದಲ್ಲಿ ಕ್ರೀಡಿಸಿದನು. ಆದುದರಿಂದ ಅವನಿಗೆ ಮಹಾಶೃಂಗ ಎಂದು ಹೆಸರು.

**೫೩೭. ಕೃತಾಂತಕೃತ್**—ಕಾರ್ಯರೂಪವಾಗಿರುವ ಜಗತ್ತನ್ನು ನಾಶಮಾಡುವವನು.

ಅಥವಾ ಮೃತ್ಯುವನ್ನು ತುಂಡುಮಾಡುವವನು (ನಾಶಮಾಡುವವನು).

**೫೩೮. ಮಹಾವರಾಹಃ**—ಮಹಾವರಾಹರೂಪವನ್ನು ಧರಿಸಿದವನು.

**೫೩೯. ಗೋವಿಂದಃ**—ವೇದಾಂತವಾಕ್ಯಗಳ ಮೂಲಕ ತಿಳಿಯಲ್ಪಡುವವನು.

ಅಥವಾ ಮನುಷ್ಯನು ಭಗವಂತನನ್ನು ವಾಣಿಗಳ ಮೂಲಕವೇ ಹೊಂದುತ್ತಾನೆ. ಆದುದರಿಂದ ಭಗವಂತನು ಗೋವಿಂದ ಎನಿಸುತ್ತಾನೆ.

'ಗೋಭಿರೇವ ಯತೋ ವೇದ್ಯೋ ಗೋವಿಂದಃ ಸಮುದಾಹೃತಃ' 'ಭಗವಂತನು ವಾಣಿಗಳಿಂದಲೇ ವೇದ್ಯನಾದುದರಿಂದ ಗೋವಿಂದ ಎಂದು ಕರೆಯಲ್ಪಡುತ್ತಾನೆ.' (ವಿಷ್ಣುತಿಲಕ).

**೫೪೦. ಸುಷೇಣಃ**—ಸುಂದರವಾದ ಪಾರ್ಷದ ಸಮೂಹವುಳ್ಳವನು.

**೫೪೧. ಕನಕಾಂಗದೀ**—ಸುವರ್ಣಮಯವಾದ ಭುಜಬಂಧ (ಭುಜಾಭರಣ)ವುಳ್ಳವನು.

**೫೪೨. ಗುಹ್ಯಃ**—ರಹಸ್ಯವಾದ ಉಪನಿಷತ್ತುಗಳ ಮೂಲಕ ವೇದ್ಯನಾಗುವವನು.

ಅಥವಾ ಹೃದಯಾಕಾಶದಲ್ಲಿರುವವನು.

**೫೪೩. ಗಭೀರಃ**—ಜ್ಞಾನ ಐಶ್ವರ್ಯ ಬಲ ಮತ್ತು ವೀರ್ಯ ಮೊದಲಾದುವುಗಳಿಂದ ಗಂಭೀರನಾಗಿರುವವನು.

**೫೪೪. ಗಹನಃ**—ದುಃಸಾಧ್ಯವಾದ ಪ್ರವೇಶವುಳ್ಳವನು.

ಭಗವಂತನಲ್ಲಿ ಪ್ರವೇಶವು ದುಃಸಾಧ್ಯವಾದುದು. ಆದುದರಿಂದ ಭಗವಂತನಿಗೆ ಗಹನ ಎಂದು ಹೆಸರು. ಅಥವಾ ಭಗವಂತನು ಅವಸ್ಥಾತ್ರಯಗಳ ಭಾವ-ಅಭಾವಗಳಿಗೆ ಸಾಕ್ಷಿಯಾಗಿರುವನಾದುದರಿಂದ ಅವನಿಗೆ ಗಹನ ಎಂದು ಹೆಸರು.

**೫೪೫. ಗುಪ್ತಃ**—ವಾಙ್ಮನಗಳಿಗೆ ಅಗೋಚರನಾಗಿರುವವನು.

'ಏಷ ಸರ್ವೇಷು ಭೂತೇಷು ಗೂಢೋಽತ್ಮಾನ ಪ್ರಕಾಶತೇ' 'ಸರ್ವಭೂತಗಳಲ್ಲಿ ಗುಪ್ತನಾಗಿರುವ ಈ ಆತ್ಮನು ಪ್ರಕಾಶಿಸುವುದಿಲ್ಲ.' (ಕ.ಉ. ೧.೩.೧೨)

**೫೪೬. ಚಕ್ರಗದಾಧರಃ**—ಚಕ್ರವನ್ನೂ ಗದೆಯನ್ನೂ ಧರಿಸಿದವನು.

ಲೋಕಸಂರಕ್ಷಣೆಗೋಸ್ಕರ ಮನಸ್ತತ್ತ್ವವೆಂಬ ಚಕ್ರವನ್ನೂ ಬುದ್ಧಿತತ್ತ್ವವೆಂಬ ಗದೆಯನ್ನೂ ಧರಿಸಿದ್ದರಿಂದ ವಿಷ್ಣುವು ಚಕ್ರಗದಾಧರನೆಂದು ಹೇಳಲ್ಪಡುತ್ತಾನೆ.

**೫೪೭. ವೇಧಾಃ**—ಸೃಷ್ಟಿಕರ್ತೃವು.

**೫೪೮. ಸ್ವಾಂಗಃ**—ಕಾರ್ಯವನ್ನು ಮಾಡುವುದರಲ್ಲಿ ಸ್ವಯಮೇವ ಸಹಕಾರಿಯಾಗುವವನು.

**೫೪೯. ಅಜಿತಃ**—ತನ್ನ ಅವತಾರಗಳಲ್ಲಿ ಯಾರಿಂದಲೂ ಜಯಿಸಲ್ಪಡದೇ ಇರುವವನು.

**೫೫೦. ಕೃಷ್ಣಃ**—ಕೃಷ್ಣದ್ವೈಪಾಯನನು.

'ಕೃಷ್ಣದ್ವೈಪಾಯನಂ ವ್ಯಾಸಂ . . . ಮಹಾಭಾರತಕೃದ್ ಭವೇತ್' 'ಕೃಷ್ಣದ್ವೈಪಾಯನನಾದ ವ್ಯಾಸನನ್ನು ಪ್ರಭುವಾದ ನಾರಾಯಣನೆಂದೇ ತಿಳಿ. ಪುಂಡರೀಕಾಕ್ಷನು ಹೊರತು ಮಹಾಭಾರತವನ್ನು ಯಾರು ರಚಿಸಬಲ್ಲರು?' (ವಿಷ್ಣು. ೩.೪. ೫).

**೫೫೧. ದೃಢಃ** — ಸ್ವರೂಪಸಾಮರ್ಥ್ಯಗಳೇ ಮೊದಲಾದುವುಗಳಿಂದ ಚ್ಯುತಿಹೊಂದದವನು.

**೫೫೨. ಸಂಕರ್ಷಣೋಽಚ್ಯುತಃ** — ಸಂಕರ್ಷಣನೂ ಅಚ್ಯುತನೂ ಆಗಿರುವವನು.

ಭಗವಂತನು ಸಂಹಾರಸಮಯದಲ್ಲಿ ಸಮಸ್ತಪ್ರಜೆಗಳನ್ನು ಒಂದೇ ಸಲ ತನ್ನಲ್ಲಿ ಎಳೆದುಕೊಳ್ಳುತ್ತಾನೆ. ಆದುದರಿಂದ ಅವನು ಸಂಕರ್ಷಣನು. ತನ್ನ ಸ್ವರೂಪವೇ ಮೊದಲಾದುವುಗಳಿಂದ ಚ್ಯುತಿಹೊಂದುವುದಿಲ್ಲವಾದುದರಿಂದ ಭಗವಂತನು ಅಚ್ಯುತನು

೫೫೩. ವರುಣಃ—ಸೂರ್ಯನು.

ಸೂರ್ಯನು ಸಾಯಂಕಾಲ ತನ್ನ ಕಿರಣಗಳನ್ನು ಸಂವರಣಮಾಡಿಕೊಳ್ಳುವುದರಿಂದ ಅವನಿಗೆ ವರುಣ ಎಂದು ಹೆಸರು. ಸೂರ್ಯನು ಭಗವಂತನ ಒಂದು ವಿಭೂತಿಯಾದುದರಿಂದ ಭಗವಂತನಿಗೂ ವರುಣ ಎಂದು ಹೆಸರು.

೫೫೪. ವಾರುಣಃ—ವರುಣನ ಪುತ್ರನಾದ ವಸಿಷ್ಠ ಅಥವಾ ಅಗಸ್ತ್ಯ ಆಗಿರುವವನು.

ವಸಿಷ್ಠ, ಅಗಸ್ತ್ಯ–ಇವರು ಭಗವಂತನ ವಿಭೂತಿಗಳಾದುದರಿಂದ ಭಗವಂತನಿಗೂ ವಾರುಣ ಎಂದು ಹೆಸರು.

೫೫೫. ವೃಕ್ಷಃ—ವೃಕ್ಷದಂತೆ ಅಚಲನಾಗಿರುವವನು.

'ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕಃ' 'ಏಕನಾದ (ಪರಮಾತ್ಮನು) ವೃಕ್ಷದಂತೆ ಸ್ಥಿರವಾಗಿ ದೇವಲೋಕದಲ್ಲಿ ಅವಸ್ಥಿತನಾಗಿರುವನು' (ಶ್ವೇ. ಉ. ೩. ೯).

೫೫೬. ಪುಷ್ಕರಾಕ್ಷಃ—ಹೃದಯಕಮಲದಲ್ಲಿ ಧ್ಯಾನಿಸಲ್ಪಡುವಾಗ ತನ್ನ ಸ್ವರೂಪದಿಂದ ಪ್ರಕಾಶಿಸುವವನು.

೫೫೭. ಮಹಾಮನಾಃ—ಸೃಷ್ಟಿ-ಸ್ಥಿತಿ-ಲಯ-ಕರ್ಮಗಳನ್ನು ಮನಸ್ಸಿನಿಂದಲೇ ಮಾಡುವವನು.

'ಮನಸೈವ ಜಗತ್ಸೃಷ್ಟಿಂ ಸಂಹಾರಂ ಚ ಕರೋತಿ ಯಃ' 'ಯಾವನು (ಭಗವಂತನು) ಮನಸ್ಸಿನಿಂದಲೇ ಜಗತ್ಸೃಷ್ಟಿಯನ್ನೂ ಸಂಹಾರವನ್ನೂ ಮಾಡುತ್ತಾನೋ' (ವಿಷ್ಣು).

೫೫೮. ಭಗವಾನ್—ಭಗವಂತನು.

'ಐಶ್ವರ್ಯಸ್ಯ ಸಮಗ್ರಸ್ಯ . . . ಷಣ್ಣಾಂ ಭಗ ಇತೀರಣಾ' 'ಸಮಗ್ರವಾದ ಐಶ್ವರ್ಯ, ಧರ್ಮ, ಯಶಸ್ಸು, ಸಂಪತ್ತು, ಜ್ಞಾನ ಮತ್ತು ವೈರಾಗ್ಯ— ಈ ಆರಕ್ಕೆ ಭಗ ಎಂದು ಹೇಳುತ್ತಾರೆ' (ವಿಷ್ಣು. ೬. ೫. ೭೪); ಇವುಗಳುಳ್ಳವನು ಭಗವಂತನು. ಅಥವಾ 'ಉತ್ಪತ್ತಿಂ ಪ್ರಲಯಂ ಚೈವ . . . ಸ ವಾಚ್ಯೋ ಭಗವಾನಿತಿ' 'ಉತ್ಪತ್ತಿಪ್ರಲಯಗಳನ್ನೂ, ಭೂತಗಳ ಬರುವಿಕೆ-ಹೋಗುವಿಕೆಗಳನ್ನೂ ಮತ್ತು ವಿದ್ಯೆ-ಅವಿದ್ಯೆಗಳನ್ನೂ ತಿಳಿದವನು ಭಗವಂತನೆಂದು ಹೇಳಲ್ಪಡುತ್ತಾನೆ' (ವಿಷ್ಣು. ೬. ೫. ೭೮).

೫೫೯. ಭಗಹಾ—ಪ್ರಲಯಕಾಲದಲ್ಲಿ ಐಶ್ವರ್ಯವೇ ಮೊದಲಾದುವುಗಳನ್ನು ನಾಶಮಾಡುವವನು.

೫೬೦. ಆನಂದೀ—ಸುಖಸ್ವರೂಪನಾಗಿರುವವನು.

ಅಥವಾ ಭಗವಂತನು ಸಂಪತ್ತುಗಳಿಂದ ಸಮೃದ್ಧನಾಗಿರುವವನಾದುದರಿಂದ ಅವನಿಗೆ ಆನಂದೀ ಎಂದು ಹೆಸರು.

೫೬೧. **ವನಮಾಲೀ**—ಭೂತತನ್ಮಾತ್ರರೂಪವಾದ ವೈಜಯಂತೀ ಎಂಬ ವನಮಾಲೆಯನ್ನು ಧರಿಸಿದವನು.

೫೬೨. **ಹಲಾಯುಧಃ**—ಬಲಭದ್ರನಾಗಿ ನೇಗಿಲನ್ನು ಆಯುಧವಾಗಿ ಧರಿಸಿದವನು.

೫೬೩. **ಆದಿತ್ಯಃ**—ಅದಿತಿಯಲ್ಲಿ ಹುಟ್ಟಿದವನು.

ಭಗವಂತನು ಕಶ್ಯಪನಿಂದ ಅದಿತಿಯಲ್ಲಿ ವಾಮನರೂಪದಿಂದ ಹುಟ್ಟಿದನು. ಆದುದರಿಂದ ಅವನಿಗೆ ಆದಿತ್ಯ ಎಂದು ಹೆಸರು.

೫೬೪. **ಜ್ಯೋತಿರಾದಿತ್ಯಃ**—ಸೂರ್ಯಮಂಡಲದಲ್ಲಿ ಅವಸ್ಥಿತನಾಗಿರುವವನು.

೫೬೫. **ಸಹಿಷ್ಣುಃ** — ಶೀತೋಷ್ಣಾದಿದ್ವಂದ್ವಗಳನ್ನು ಸಹಿಸಿಕೊಳ್ಳುವವನು.

೫೬೬. **ಗತಿಸತ್ತಮಃ**—ಗತಿಯೂ ಸರ್ವಶ್ರೇಷ್ಠನೂ ಆಗಿರುವವನು.

೫೬೭. **ಸುಧನ್ವಾ**-ಇಂದ್ರಿಯಾದಿಮಯವಾದ ಶಾಂರ್ಗ ಎಂಬ ಹೆಸರಿನ ಸುಂದರವಾದ ಧನುಸ್ಸುಳ್ಳವನು.

೫೬೮. **ಖಂಡಪರಶುಃ**—ಪರಶುರಾಮನು.

ಶತ್ರುಗಳನ್ನು ಖಂಡಿಸಿದವನೂ ಕೊಡಲಿಯನ್ನು ಧರಿಸಿದವನೂ ಆದುದರಿಂದ ಪರಶುರಾಮನಿಗೆ ಖಂಡಪರಶು ಎಂದು ಹೆಸರು. ಪರಶುರಾಮನು ಭಗವಂತನ ಅವತಾರವಾದುದರಿಂದ ಭಗವಂತನಿಗೂ ಖಂಡಪರಶು ಎಂದು ಹೆಸರು. ಅಥವಾ

**ಅಖಂಡಪರಶುಃ**—ಪರಶುರಾಮನ ಕೊಡಲಿಯು ಅಖಂಡಿತವಾದುದಾದ್ದರಿಂದ ಅವನಿಗೆ ಅಖಂಡಪರಶು ಎಂದು ಹೆಸರು. ಅವನು ಭಗವಂತನ ಅವತಾರವಾದುದರಿಂದ ಭಗವಂತನಿಗೂ ಅಖಂಡಪರಶು ಎಂದು ಹೆಸರು.

೫೬೯. **ದಾರುಣಃ**-ಸನ್ಮಾರ್ಗವಿರೋಧಿಗಳಿಗೆ ಕ್ರೂರನಾಗಿ ಇರುವವನು.

೫೭೦. **ದ್ರವಿಣಪ್ರದಃ**—ಭಕ್ತರಿಗೆ ಅವರು ಇಚ್ಛಿಸಿದ ಧನವನ್ನು ಕೊಡುವವನು.

೫೭೧. **ದಿವಃಸ್ಪೃಕ್**—ಸ್ವರ್ಗಲೋಕವನ್ನು ಸ್ಪರ್ಶಿಸುವವನು.

೫೭೨. **ಸರ್ವದೃಗ್ವ್ಯಾಸಃ**—ಸರ್ವಜ್ಞಾನಗಳನ್ನು ವಿಸ್ತರಿಸಿದವನು.

ಅಥವಾ ಭಗವಂತನು ಸರ್ವಾಕಾರಜ್ಞಾನಸ್ವರೂಪನಾದುದರಿಂದ ಅಥವಾ ಎಲ್ಲದರ ದೃಷ್ಟಿಯಾಗಿರುವನಾದುದರಿಂದ ಸರ್ವದೃಕ್. ಬ್ರಹ್ಮನು ವೇದಗಳನ್ನು ಋಗ್ವೇದಾದಿ ವಿಭಾಗದಿಂದ ನಾಲ್ಕು ಭಾಗವಾಗಿ ವಿಭಾಗಿಸಿದನು. ಮೊದಲನೆಯ

ವೇದವಾದ ಋಗ್ವೇದವನ್ನು ಇಪ್ಪತ್ತೊಂದು ಶಾಖೆಗಳಾಗಿಯೂ, ಎರಡನೆಯ ವೇದವಾದ ಯಜುರ್ವೇದವನ್ನು ನೂರೊಂದು ಶಾಖೆಗಳಾಗಿಯೂ, ಸಾಮವೇದವನ್ನು ಸಾವಿರ ಶಾಖೆಗಳಾಗಿಯೂ, ಅಥರ್ವವೇದವನ್ನು ಒಂಭತ್ತು ಶಾಖೆಗಳಾಗಿಯೂ ವಿಭಾಗಿಸಿದನು. ಹಾಗೆಯೇ ಅವನು ಪುರಾಣಗಳನ್ನೂ ವಿಭಾಗಿಸಿದನು. ಆದುದರಿಂದ ಬ್ರಹ್ಮನು ವ್ಯಾಸ ಎಂದೆನಿಸುತ್ತಾನೆ. ಬ್ರಹ್ಮನು ಭಗವಂತನ ವಿಭೂತಿಯಾದುದರಿಂದ ಭಗವಂತನೂ ವ್ಯಾಸ ಎಂದೆನಿಸುತ್ತಾನೆ.

೫೭೩. **ವಾಚಸ್ಪತಿರಯೋನಿಜಃ**—ವಿದ್ಯೆಗೆ ಒಡೆಯನಾಗಿರುವವನು ಮತ್ತು ಜನನಿಯಲ್ಲಿ ಹುಟ್ಟದೆ ಇರುವವನು.

೫೭೪. **ತ್ರಿಸಾಮಾ**—ದೇವವ್ರತ ಎಂಬ ಹೆಸರಿನ ಮೂರು ಸಾಮಗಳಿಂದ ಸ್ತುತಿಸಲ್ಪಟ್ಟವನು.

೫೭೫. **ಸಾಮಗಃ**—ಸಾಮವನ್ನು ಹಾಡುವವನು.

೫೭೬. **ಸಾಮ**—ಸಾಮವೇದವಾಗಿರುವವನು.

'ವೇದಾನಾಂ ಸಾಮವೇದೋಽಸ್ಮಿ' 'ವೇದಗಳಲ್ಲಿ ನಾನು ಸಾಮವೇದವಾಗಿದ್ದೇನೆ' (ಗೀತಾ. ೧೦. ೨೨).

೫೭೭. **ನಿರ್ವಾಣಮ್** — ಸರ್ವದುಃಖರಹಿತವಾದ ಪರಮಾನಂದವಾಗಿರುವವನು.

೫೭೮. **ಭೇಷಜಮ್**—ಸಂಸಾರರೂಪವಾದ ರೋಗಕ್ಕೆ ಔಷಧವಾಗಿರುವವನು.

೫೭೯. **ಭಿಷಕ್**—ಸಂಸಾರವೆಂಬ ರೋಗದಿಂದ ಬಿಡುಗಡೆ ಮಾಡುವಂತಹ ಪರಾವಿದ್ಯೆಯನ್ನು ಗೀತೆಯಲ್ಲಿ ಉಪದೇಶಿಸಿದವನು.

'ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ' 'ನೀನು ವೈದ್ಯರಲ್ಲೆಲ್ಲ ಅತ್ಯಂತ ಶ್ರೇಷ್ಠವೈದ್ಯನೆಂದು ಕೇಳಿದ್ದೆ' (ಶ್ರುತಿ).

೫೮೦. **ಸಂನ್ಯಾಸಕೃತ್**-ಮೋಕ್ಷಾರ್ಥವಾಗಿ ನಾಲ್ಕನೆಯದಾದ ಸಂನ್ಯಾಸಾಶ್ರಮವನ್ನು ರಚಿಸಿದವನು.

೫೮೧. **ಶಮಃ**—ಸಂನ್ಯಾಸಿಗಳಿಗೆ ಶಮವೇ ಮುಖ್ಯವಾದ ಜ್ಞಾನಸಾಧನೆ ಎಂದು ಹೇಳಿದವನು.

'ಯತೀನಾಂ ಪ್ರಶಮೋ ಧರ್ಮೋ . . . ಶುಶ್ರೂಷಾ ಬ್ರಹ್ಮಚಾರಿಣಾಮ್' 'ಯತಿಗಳಿಗೆ ಶಮವೇ ಧರ್ಮವು; ವನವಾಸಿಗಳಿಗೆ ನಿಯಮವೇ ಧರ್ಮವು ; ಗೃಹಸ್ಥರಿಗೆ ದಾನವೇ ಧರ್ಮವು ; ಬ್ರಹ್ಮಚಾರಿಗಳಿಗೆ ಶುಶ್ರೂಷೆಯೇ ಧರ್ಮವು' (ಸ್ಮೃತಿ).

ಅಥವಾ ಭಗವಂತನು ಸರ್ವಭೂತಗಳನ್ನು ಶಮನಮಾಡುವವನಾದುದರಿಂದ ಅವನಿಗೆ ಶಮ ಎಂದು ಹೆಸರು.

೫೮೨. **ಶಾಂತಃ**—ವಿಷಯಸುಖಗಳಲ್ಲಿ ಅಸಕ್ತನಾಗಿರುವವನು.

೫೮೩. ನಿಷ್ಠಾ—ಪ್ರಲಯಕಾಲದಲ್ಲಿ ಯಾವಾಗಲೂ ಭೂತಗಳಿಗೆಲ್ಲ ಆಶ್ರಯವಾಗಿರುವವನು.

೫೮೪. ಶಾಂತಿಃ—ಶಾಂತಿಸ್ವರೂಪನಾಗಿರುವವನು.

ಸಮಸ್ತ ಅವಿದ್ಯೆಯಿಂದ ನಿವೃತ್ತಿಹೊಂದುವುದೇ ಶಾಂತಿಯು. ಈ ಶಾಂತಿಯು ಬ್ರಹ್ಮವೇ ಆಗಿರುವುದು.

೫೮೫. ಪರಾಯಣಮ್—ಉತ್ಕೃಷ್ಟವಾದ ಸ್ಥಾನವಾಗಿರುವವನು.

ಭಗವಂತನು ಪುನರಾವೃತ್ತಿಯ (ಸಂಸಾರಕ್ಕೆ ಹಿಂತಿರುಗುವುದರ) ಭಯವಿಲ್ಲದ ಉತ್ಕೃಷ್ಟವಾದ ಸ್ಥಾನವಾಗಿರುವನು. ಆದುದರಿಂದ ಅವನಿಗೆ ಪರಾಯಣಮ್ ಎಂದು ಹೆಸರು.

೫೮೬. ಶುಭಾಂಗಃ—ಸುಂದರವಾದ ಶರೀರವನ್ನು ಧರಿಸಿದವನು.

೫೮೭. ಶಾಂತಿದಃ-ರಾಗದ್ವೇಷಾದಿಗಳಿಂದ ಬಿಡುಗಡೆ ಹೊಂದುವಿಕೆಯ ರೂಪವಾದ ಶಾಂತಿಯನ್ನು ಕೊಡುವವನು.

೫೮೮. ಸ್ರಷ್ಟಾ—ಸೃಷ್ಟಿಯ ಆರಂಭದಲ್ಲಿ ಸಕಲಭೂತಗಳನ್ನು ಹುಟ್ಟಿಸಿದವನು.

೫೮೯. ಕುಮುದಃ—ಪೃಥ್ವಿಯಲ್ಲಿ ಸಂತೋಷಪಡುವವನು.

೫೯೦. ಕುವಲೇಶಯಃ—ನೀರಿನಮೇಲೆ ಶಯನಮಾಡುವವನು.

ಅಥವಾ (ಒಬ್ಬ ಋಷಿಪುತ್ರನ ಶಾಪದಮೇರೆಗೆ ಪರೀಕ್ಷಿತರಾಜನನ್ನು ಕಚ್ಚಲು) ತಕ್ಷಕನು ಒಂದು ಬದರೀಫಲ (ಕುವಲ) ದೊಳಗೆ ಮಲಗಿದ್ದನಾದ್ದರಿಂದ ಅವನಿಗೆ ಕುವಲೇಶಯ ಎಂದು ಹೆಸರು. ತಕ್ಷಕನು ಶ್ರೀಹರಿಯ ವಿಭೂತಿಯಾದುದರಿಂದ ಶ್ರೀಹರಿಯೂ ಕುವಲೇಶಯ ಎಂದು ಕರೆಯಲ್ಪಡುತ್ತಾನೆ. ಅಥವಾ ಭೂಮಿಯನ್ನು ಆಶ್ರಯಿಸುವುದರಿಂದ ಸರ್ಪಗಳ ಉದರಕ್ಕೆ ಕುವಲ ಎಂದು ಹೇಳುತ್ತಾರೆ. ಭಗವಂತನು ಶೇಷನ ಉದರದಲ್ಲಿ ಶಯನಮಾಡುವವನಾದುದರಿಂದ (ಶೇಷಶಾಯಿಯಾದುದರಿಂದ) ಅವನಿಗೆ ಕುವಲೇಶಯ ಎಂದು ಹೆಸರು.

೫೯೧. ಗೋಹಿತಃ—ಗೋವುಗಳಿಗೆ ಹಿತವನ್ನುಂಟುಮಾಡಿದವನು.

ಗೋವುಗಳ ಅಭಿವೃದ್ಧಿಗೋಸ್ಕರ ಗೋವರ್ಧನ ಪರ್ವತವನ್ನು ಎತ್ತಿಹಿಡಿದು ಗೋವುಗಳಿಗೆ ಹಿತವನ್ನುಂಟುಮಾಡಿದವನಾದುದರಿಂದ ಭಗವಂತನಿಗೆ ಗೋಹಿತ ಎಂದು ಹೆಸರು. ಅಥವಾ ಭೂಮಿಯ ಭಾರವನ್ನು ಇಳಿಸುವುದಕ್ಕೋಸ್ಕರ ಶರೀರವನ್ನು ಗ್ರಹಣಮಾಡಿದವನು.

೫೯೨. ಗೋಪತಿಃ—ಪೃಥ್ವಿಗೆ ಒಡೆಯನಾಗಿರುವವನು.

೫೯೩. ಗೋಪ್ತಾ—ಜಗದ್ರಕ್ಷಕನು.

ಅಥವಾ ಭಗವಂತನು ತನ್ನ ಮಾಯೆಯಿಂದ ತನ್ನ ಆತ್ಮವನ್ನು ಮುಚ್ಚಿಕೊಂಡಿರುವನಾದುದರಿಂದ ಅವನಿಗೆ ಗೋಪ್ತಾ ಎಂದು ಹೆಸರು.

**೫೯೪. ವೃಷಭಾಕ್ಷಃ**—ಸಕಲ ಇಷ್ಟಾರ್ಥಗಳನ್ನು ವರ್ಷಿಸುವ ಕಣ್ಣುಗಳುಳ್ಳವನು.

ಅಥವಾ ವೃಷಭ ಎಂದು ಧರ್ಮಕ್ಕೆ ಹೇಳುತ್ತಾರೆ; ಅದುದರಿಂದ ವೃಷಭಾಕ್ಷ ಎಂದರೆ ಧರ್ಮವೇ ದೃಷ್ಟಿಯಾಗಿರುವವನು.

**೫೯೫. ವೃಷಪ್ರಿಯಃ**—ಧರ್ಮವು ತನಗೆ ಪ್ರಿಯವಾಗಿ ಉಳ್ಳವನು.

ಅಥವಾ ಭಗವಂತನು ಧರ್ಮವೂ ಪ್ರಿಯನೂ ಆಗಿರುವನಾದುದರಿಂದ ವೃಷಪ್ರಿಯನು.

**೫೯೬. ಅನಿವರ್ತೀ**—ಸುರಾಸುರರ ಸಂಗ್ರಾಮದಿಂದ ಹಿಂದಿರುಗದೆ ಇರುವವನು.

ಅಥವಾ ಭಗವಂತನಿಗೆ ಧರ್ಮವು ಪ್ರಿಯವಾದುದಾದ್ದರಿಂದ ಅವನು ಧರ್ಮದಿಂದ ವಿಮುಖನಾಗುವುದಿಲ್ಲ. ಆದುದರಿಂದ ಅವನಿಗೆ ಅನಿವರ್ತೀ ಎಂದು ಹೆಸರು.

**೫೯೭. ನಿವೃತ್ತಾತ್ಮಾ**—ಸ್ವಭಾವತಃ ವಿಷಯಗಳಿಂದ ನಿವೃತ್ತವಾದ ಮನಸ್ಸುಳ್ಳವನು.

**೫೯೮. ಸಂಕ್ಷೇಪ್ತಾ**—ವಿಸ್ತಾರವಾದ ಜಗತ್ತನ್ನು ಸಂಹಾರಕಾಲದಲ್ಲಿ ಸೂಕ್ಷ್ಮರೂಪದಿಂದ ಸಂಕ್ಷೇಪಿಸುವವನು.

**೫೯೯. ಕ್ಷೇಮಕೃತ್**—ಪ್ರಾಪ್ತಿಮಾಡಿಕೊಂಡಿದ್ದನ್ನು ರಕ್ಷಿಸುವವನು.

**೬೦೦. ಶಿವಃ**—ತನ್ನ ನಾಮಸ್ಮರಣಮಾತ್ರದಿಂದ ಪವಿತ್ರಗೊಳಿಸುವವನು.

**೬೦೧. ಶ್ರೀವತ್ಸವಕ್ಷಾಃ**—ಶ್ರೀವತ್ಸವೆಂಬ ಚಿಹ್ನೆಯನ್ನು ತನ್ನ ವಕ್ಷಃಸ್ಥಳದಲ್ಲಿ ಧರಿಸಿರುವವನು.

**೬೦೨. ಶ್ರೀವಾಸಃ**—ಲಕ್ಷ್ಮಿಯ ವಾಸಸ್ಥಾನವಾಗಿರುವವನು.

ವಿಷ್ಣುವಿನ ವಕ್ಷಃಸ್ಥಳದಲ್ಲಿ ಅನಪಾಯಿನಿಯಾದ ಲಕ್ಷ್ಮಿಯು ವಾಸಮಾಡುತ್ತಾಳೆ. ಆದುದರಿಂದ ವಿಷ್ಣುವಿಗೆ ಶ್ರೀವಾಸ ಎಂದು ಹೆಸರು.

**೬೦೩. ಶ್ರೀಪತಿಃ**—ಲಕ್ಷ್ಮಿಯ ಪತಿ.

ಅಮೃತಮಂಥನಕಾಲದಲ್ಲಿ ಲಕ್ಷ್ಮಿಯು ಸುರಾಸುರರೇ ಮೊದಲಾದವರನ್ನೆಲ್ಲ ಬಿಟ್ಟು ವಿಷ್ಣುವನ್ನೇ ಪತಿಯಾಗಿ ವರಿಸಿದಳು. ಆದುದರಿಂದ ವಿಷ್ಣುವು ಶ್ರೀಪತಿಯು. ಅಥವಾ ಶ್ರೀ ಎಂದರೆ ಪರಾಶಕ್ತಿ; ವಿಷ್ಣುವು ಪರಾಶಕ್ತಿಯ ಪತಿಯಾದುದರಿಂದ ಶ್ರೀಪತಿಯು.

'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ' 'ಈತನ (ಭಗವಂತನ) ಪರಾಶಕ್ತಿಯು ವಿವಿಧವಾದುದು ಎಂದೇ (ಶ್ರುತಿಗಳಿಗೆ) ಕೇಳಿಬರುತ್ತದೆ' (ಶ್ವೇ.ಉ. ೬.೮).

**೬೦೪. ಶ್ರೀಮತಾಂ ವರಃ**—ಶ್ರೀಸಂಪನ್ನರಲ್ಲಿ ಪ್ರಧಾನನಾಗಿರುವವನು,

ಋಗ್ಯಜುಃಸಾಮರೂಪವಾದ ಶ್ರೀ (ಸಂಪತ್ತು) ಇರುವ ಬ್ರಹ್ಮನೇ ಮೊದಲಾದ ಶ್ರೀಸಂಪನ್ನರಲ್ಲೆಲ್ಲ ವಿಷ್ಣುವು ಪ್ರಧಾನಭೂತನು.

'ಋಚಃ ಸಾಮಾನಿ ಯಜೂಂಷಿ। ಸಾ ಹಿ ಶ್ರೀರಮೃತಾ ಸತಾಮ್' 'ಋಗ್ಯಜುಃಸಾಮಗಳೇ ಸತ್ಪುರುಷರ ಅಮರವಾದ ಶ್ರೀ' (ಶ್ರುತಿ).

೬೦೫. ಶ್ರೀದಃ—ಭಕ್ತರಿಗೆ ಶ್ರೀಯನ್ನು ಕೊಡುವವನು.

೬೦೬. ಶ್ರೀಶಃ—ಶ್ರೀಗೆ ಒಡೆಯನಾಗಿರುವವನು.

೬೦೭. ಶ್ರೀನಿವಾಸಃ—ಶ್ರೀಮಂತರಲ್ಲಿ ನಿತ್ಯವೂ ವಾಸಮಾಡುವವನು.

೬೦೮. ಶ್ರೀನಿಧಿಃ—ಅಖಿಲಸಂಪತ್ತುಗಳಿಗೆ ನಿಧಿಯಾಗಿರುವವನು.

ಸರ್ವಶಕ್ತಿವಂತನಾದ ಭಗವಂತನು ಅಖಿಲಸಂಪತ್ತುಗಳಿಗೆ ನಿಧಿಯಾಗಿರುವನಾದುದರಿಂದ ಅವನಿಗೆ ಶ್ರೀನಿಧಿ ಎಂದು ಹೆಸರು.

೬೦೯. ಶ್ರೀವಿಭಾವನಃ—ಸಮಸ್ತಭೂತಗಳಿಗೆ ಅವರವರ ಕರ್ಮಾನುಸಾರವಾಗಿ ವಿವಿಧ ಸಂಪತ್ತುಗಳನ್ನು ಕೊಡುವವನು.

೬೧೦. ಶ್ರೀಧರಃ—ಸರ್ವಭೂತಗಳಿಗೆ ಜನನಿಯಾದ ಶ್ರೀ (ಲಕ್ಷ್ಮಿ) ಯನ್ನು ವಕ್ಷಃಸ್ಥಳದಲ್ಲಿ ಧರಿಸಿರುವವನು.

೬೧೧. ಶ್ರೀಕರಃ—ತನ್ನನ್ನು ಸ್ಮರಿಸುವ, ಸ್ತುತಿಸುವ ಮತ್ತು ಪೂಜಿಸುವ ಭಕ್ತರನ್ನು ಶ್ರೀಸಂಪನ್ನರನ್ನಾಗಿ ಮಾಡುವವನು.

೬೧೨. ಶ್ರೇಯಃ—ಶ್ರೇಯೋರೂಪನು.

ಅನಪಾಯಿಯಾದ (ಎಂದಿಗೂ ನಷ್ಟವಾಗದ) ಸುಖವನ್ನು ಹೊಂದುವುದೇ ಶ್ರೇಯಸ್ಸು. ಈ ಶ್ರೇಯಸ್ಸು ಪರಮಾತ್ಮನದೇ ರೂಪವಾದುದರಿಂದ ಅವನಿಗೂ ಶ್ರೇಯಸ್ಸು ಎಂದು ಹೆಸರು.

೬೧೩. ಶ್ರೀಮಾನ್—ಶ್ರೀಸಂಪನ್ನನು.

ಸಂಪತ್ತುಗಳೆಲ್ಲ ಭಗವಂತನಲ್ಲಿ ಇರುವುವಾದ್ದರಿಂದ ಭಗವಂತನು ಶ್ರೀಮಾನ್.

೬೧೪. ಲೋಕತ್ರಯಾಶ್ರಯಃ — ಲೋಕತ್ರಯಗಳಿಗೂ ಆಶ್ರಯವಾಗಿರುವವನು.

೬೧೫. ಸ್ವಕ್ಷಃ—ತಾವರೆಯಂತೆ ಮನೋಹರವಾದ ಕಣ್ಣುಗಳುಳ್ಳವನು.

೬೧೬. ಸ್ವಂಗಃ—ಸುಂದರವಾದ ಅವಯವಗಳುಳ್ಳವನು.

೬೧೭. ಶತಾನಂದಃ—ಶತಾನಂದನು.

ಒಬ್ಬನೇ ಒಬ್ಬನಾದ ಪರಮಾನಂದಸ್ವರೂಪನಾದ ಪರಮಾತ್ಮನು ಉಪಾಧಿಭೇದದಿಂದ ನೂರುವಿಧವಾಗುತ್ತಾನೆ. ಆದುದರಿಂದ ಅವನಿಗೆ ಶತಾನಂದ ಎಂದು ಹೆಸರು.

'ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' 'ಈ ಆನಂದದ ಒಂದಂಶವನ್ನು ಅವಲಂಬಿಸಿಯೇ ಅನ್ಯಭೂತಗಳೆಲ್ಲ ಜೀವಿಸುತ್ತವೆ' (ಬೃ.ಉ. ೪.೩.೩೨).

೬೧೮. ನಂದಿಃ—ಪರಮಾನಂದಮೂರ್ತಿಯಾಗಿರುವವನು.

೬೧೯. ಜ್ಯೋತಿರ್ಗಣೇಶ್ವರಃ—ನಕ್ಷತ್ರಗಣಗಳಿಗೆಲ್ಲ ಸ್ವಾಮಿಯಾಗಿರುವವನು.

'ತಮೇವ ಭಾಂತಮನುಭಾತಿ ಸರ್ವಮ್' 'ಪ್ರಕಾಶಿಸುತ್ತಿರುವ ಅವನನ್ನೇ (ಪರಮಾತ್ಮನನ್ನೇ) ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತದೆ' (ಕ. ಉ. ೨. ೫. ೧೫).

೬೨೦. ವಿಜಿತಾತ್ಮಾ—ತನ್ನ ಮನಸ್ಸನ್ನು ಸ್ವಾಧೀನಪಡಿಸಿಕೊಂಡಿರುವವನು.

೬೨೧. ಅವಿಧೇಯಾತ್ಮಾ—ಯಾವನಿಂದಲೂ ವಿಧಿಸಲ್ಪಡದ ಸ್ವರೂಪವುಳ್ಳವನು.

೬೨೨. ಸತ್ಕೀರ್ತಿಃ—ಸತ್ಯವಾಗಿರುವ ಕೀರ್ತಿಯುಳ್ಳವನು.

೬೨೩. ಛಿನ್ನಸಂಶಯಃ—ಸಂಶಯಗಳಿಲ್ಲದವನು.

ಕರತಲಾಮಲಕದಂತೆ ಸರ್ವವನ್ನೂ ಸಾಕ್ಷಾತ್ಕರಿಸಿಕೊಂಡಿರುವ ಭಗವಂತನಿಗೆ ಯಾವ ಸಂಶಯವೂ ಇಲ್ಲ. ಆದುದರಿಂದ ಅವನು ಛಿನ್ನಸಂಶಯನು.

೬೨೪. ಉದೀರ್ಣಃ—ಸರ್ವಭೂತಗಳಿಗಿಂತ ಉತ್ಕೃಷ್ಟನಾಗಿರುವವನು.

೬೨೫. ಸರ್ವತಶ್ಚಕ್ಷುಃ—ಎಲ್ಲಾ ಕಡೆಗಳಲ್ಲಿ ಎಲ್ಲವನ್ನು ತನ್ನ ಚೈತನ್ಯದಿಂದ ನೋಡುವವನು.

'ವಿಶ್ವತಶ್ಚಕ್ಷುಃ' '(ಭಗವಂತನು) ಎಲ್ಲಾ ಕಡೆಗಳಲ್ಲೂ ಕಣ್ಣುಗಳುಳ್ಳವನು' (ಶ್ವೇ. ಉ. ೩.೩).

೬೨೬. ಅನೀಶಃ—ತನಗೆ ಬೇರೆ ಯಾವನೂ ಒಡೆಯನಿಲ್ಲದವನು.

೬೨೭. ಶಾಶ್ವತಸ್ಥಿರಃ—ಶಾಶ್ವತನೂ ಸ್ಥಿರನೂ ಆಗಿರುವವನು.

ಭಗವಂತನು ಶಾಶ್ವತನಾಗಿ ಇರುವವನಾದರೂ ಎಂದಿಗೂ ವಿಕಾರವನ್ನು ಹೊಂದುವುದಿಲ್ಲ. ಆದುದರಿಂದ ಅವನಿಗೆ ಶಾಶ್ವತಸ್ಥಿರ ಎಂದು ಹೆಸರು.

೬೨೮. ಭೂಶಯಃ—ಭೂಮಿಯಮೇಲೆ ಶಯನಮಾಡಿದವನು.

ಭಗವಂತನು ಶ್ರೀರಾಮಾವತಾರದಲ್ಲಿ ಲಂಕೆಯ ಕಡೆಗೆ ಹೋಗುವ ಮಾರ್ಗವನ್ನು ಹುಡುಕುತ್ತಿರುವ ಸಮಯದಲ್ಲಿ ಸಾಗರದ ಹತ್ತಿರ ಭೂಮಿಯ ಮೇಲೆ ಶಯನ ಮಾಡಿದ್ದನು. ಆದುದರಿಂದ ಭಗವಂತನಿಗೆ ಭೂಶಯ ಎಂದು ಹೆಸರು.

೬೨೯. ಭೂಷಣಃ—ಸ್ವೇಚ್ಛೆಯಿಂದ ಧರಿಸಿದ ಅನೇಕ ಅವತಾರಗಳಿಂದ ಭೂಮಿಯನ್ನು ಅಲಂಕರಿಸಿದವನು,

೬೩೦. ಭೂತಿಃ—ಸತ್ತಾಮಾತ್ರನಾಗಿರುವವನು.

ಅಥವಾ ವಿಭೂತಿರೂಪದಿಂದಿರುವವನು; ಅಥವಾ ಸರ್ವವಿಭೂತಿಗಳಿಗೆ ಕಾರಣನಾಗಿರುವವನು.

೬೩೧. ವಿಶೋಕಃ—ಶೋಕರಹಿತನು.

ಭಗವಂತನು ಪರಮಾನಂದೈಕರೂಪನಾದುದರಿಂದ ಶೋಕರಹಿತನು. ಆದುದರಿಂದ ಅವನಿಗೆ ವಿಶೋಕ ಎಂದು ಹೆಸರು.

೬೩೨. ಶೋಕನಾಶನಃ—ಸ್ಮರಣಮಾತ್ರದಿಂದ ಭಕ್ತರ ಶೋಕವನ್ನು ನಾಶಮಾಡುವವನು.

೬೩೩. ಅರ್ಚಿಷ್ಮಾನ್—ಪ್ರಭಾವಂತನು.

ಯಾವನ ಪ್ರಭೆಯಿಂದ ಚಂದ್ರಸೂರ್ಯಾದಿಗಳು ಪ್ರಕಾಶಮಾನರಾಗಿರುವರೋ ಆ ಭಗವಂತನೇ ಶ್ರೇಷ್ಠನಾದ ಅರ್ಚಿಷ್ಮಾನ್.

೬೩೪. ಅರ್ಚಿತಃ— ಸರ್ವಲೋಕಗಳಿಂದ ಪೂಜಿಸಲ್ಪಡುವ ಬ್ರಹ್ಮಾದಿಗಳಿಂದಲೂ ಪೂಜಿಸಲ್ಪಡುವವನು.

೬೩೫. ಕುಂಭಃ—ಕೊಡದಂತೆ ಆಶ್ರಯವಾಗಿರುವವನು.

ಎಲ್ಲಾ ವಸ್ತುಗಳು ಭಗವಂತನಲ್ಲಿ ಪ್ರತಿಷ್ಠಿತವಾಗಿವೆ. ಕೊಡವು ನೀರಿಗೆ ಆಶ್ರಯವಾಗುವ ಹಾಗೆ ಭಗವಂತನು ಸಮಸ್ತವಸ್ತುಗಳಿಗೆ ಅಶ್ರಯವಾಗಿರುವನು.

೬೩೬. ವಿಶುದ್ಧಾತ್ಮಾ—ವಿಶುದ್ಧನೂ ಆತ್ಮನೂ ಆಗಿರುವವನು.

ಭಗವಂತನು ಆತ್ಮನೂ ಆಗಿರುವನು ಮತ್ತು ತ್ರಿಗುಣಗಳಿಗೆ ಅತೀತನಾದುದರಿಂದ ಪರಿಶುದ್ಧನೂ ಆಗಿರುವನು. ಆದುದರಿಂದ ಅವನು ವಿಶುದ್ಧಾತ್ಮನು.

೬೩೭. ವಿಶೋಧನಃ—ಸ್ಮರಣಮಾತ್ರದಿಂದ ಪಾಪಗಳನ್ನು ನಾಶಮಾಡುವವನು.

೬೩೮. ಅನಿರುದ್ಧಃ—ಅನಿರುದ್ಧನು.

ವಿಷ್ಣುವಿನ ಚತುರ್ವ್ಯೂಹಗಳಲ್ಲಿ ಅನಿರುದ್ಧ ಎಂಬವನು ನಾಲ್ಕನೆಯ ವ್ಯೂಹವಾಗಿರುವನಾದುದರಿಂದ ಅಥವಾ ಭಗವಂತನು ಎಂದಿಗೂ ಶತ್ರುಗಳಿಂದ ನಿರೋಧಿಸಲ್ಪಡುವುದಿಲ್ಲವಾದುದರಿಂದ ಅವನಿಗೆ ಅನಿರುದ್ಧ ಎಂದು ಹೆಸರು.

೬೩೯. ಅಪ್ರತಿರಥಃ—ಪ್ರತಿಪಕ್ಷವಿಲ್ಲದವನು.

೬೪೦. ಪ್ರದ್ಯುಮ್ನಃ—ಪ್ರಕೃಷ್ಟವಾದ ಧನವುಳ್ಳವನು.

ಅಥವಾ ಪ್ರದ್ಯುಮ್ನನು ವಿಷ್ಣುವಿನ ಚತರ್ವ್ಯೂಹಗಳಲ್ಲಿ ಒಬ್ಬನು. ಆದುದರಿಂದ ಭಗವಂತನಿಗೆ ಪ್ರದ್ಯುಮ್ನ ಎಂದು ಹೆಸರು

೬೪೧. ಅಮಿತವಿಕ್ರಮಃ—ಅಪಾರವಾದ ಪರಾಕ್ರಮವುಳ್ಳವನು.

ಅಥವಾ ಅಪ್ರತಿಹತಪರಾಕ್ರಮವುಳ್ಳವನು.

೬೪೨. **ಕಾಲನೇಮಿನಿಹಾ**—ಕಾಲನೇಮಿ ಎಂಬ ಅಸುರನನ್ನು ಕೊಂದವನು.

೬೪೩. **ವೀರಃ**—ಶೌರ್ಯಶಾಲಿಯಾಗಿರುವವನು.

೬೪೪. **ಶೌರಿಃ**—ಶೂರಕುಲದಲ್ಲಿ (ಶ್ರೀಕೃಷ್ಣನಾಗಿ) ಹುಟ್ಟಿದವನು.

೬೪೫. **ಶೂರಜನೇಶ್ವರಃ** — ಶೌರ್ಯಶಾಲಿಗಳಾದ ಇಂದ್ರಾದಿಗಳಿಗೂ ಸ್ವಾಮಿಯಾಗಿರುವವನು.

ಭಗವಂತನು ತನ್ನ ಶೌರ್ಯಾತಿಶಯದಿಂದ ಶೌರ್ಯಶಾಲಿಗಳಾದ ಇಂದ್ರಾದಿಗಳಿಗೆ ಸ್ವಾಮಿಯಾಗಿರುವನು ಮತ್ತು ಪ್ರಿಯನಾಗಿರುವನು.

೬೪೬. **ತ್ರಿಲೋಕಾತ್ಮಾ** — ಮೂರು ಲೋಕಗಳಿಗೂ ಆತ್ಮನಾಗಿರುವವನು.

ಭಗವಂತನು ಮೂರು ಲೋಕಗಳಿಗೂ ಅಂತರ್ಯಾಮಿಯಾಗಿರುವನಾದುದರಿಂದ ಅವುಗಳ ಆತ್ಮನೆನಿಸುವನು ; ಆದುದರಿಂದ ಅವನು ತ್ರಿಲೋಕಾತ್ಮಾ ಅಥವಾ ಮೂರುಲೋಕಗಳೂ ವಾಸ್ತವವಾಗಿ ಭಗವಂತನಿಂದ ಭಿನ್ನವಾದವುಗಳಲ್ಲ ; ಆದುದರಿಂದ ಭಗವಂತನಿಗೆ ತ್ರಿಲೋಕಾತ್ಮಾ ಎಂದು ಹೆಸರು.

೬೪೭. **ತ್ರಿಲೋಕೇಶಃ** — ಮೂರು ಲೋಕಗಳಿಗೂ ಈಶ್ವರನಾಗಿರುವವನು.

ಮೂರು ಲೋಕಗಳೂ ಭಗವಂತನ ಆಜ್ಞೆಯಿಂದ ತಮ್ಮ ತಮ್ಮ ಕಾರ್ಯಗಳಲ್ಲಿ ವರ್ತಿಸುತ್ತಿವೆ. ಆದುದರಿಂದ ಭಗವಂತನು ತ್ರಿಲೋಕೇಶನು.

೬೪೮. **ಕೇಶವಃ**—ಕಿರಣಗಳಿಂದ ಕೂಡಿದವನು.

ಸೂರ್ಯಾದಿಗಳನ್ನು ಪ್ರವೇಶಿಸುವ ಕಿರಣಗಳಿಗೆ ಕೇಶ ಎಂದು ಹೆಸರು. ಭಗವಂತನು ಕೇಶಗಳಿಂದ ಕೂಡಿದವನಾದುದರಿಂದ ಕೇಶವನು. ಅಥವಾ ಬ್ರಹ್ಮ ವಿಷ್ಣು ಮತ್ತು ಶಿವ ಎಂಬ ಹೆಸರಿನ ಶಕ್ತಿಗಳಿಗೆ ಕೇಶ ಎಂದು ಹೆಸರು. ಭಗವಂತನು ಅವುಗಳಿಂದ ಕೂಡಿದವನಾದುದರಿಂದ ಕೇಶವನು.

'ಅಂಶವೋ ಯೇ ಪ್ರಕಾಶಂತೇ ........ ಮಾಮಾಹುರ್ದ್ವಿಜಸತ್ತಮಾಃ' 'ನನ್ನ ಯಾವ ಕಿರಣಗಳು ಪ್ರಕಾಶಿಸುತ್ತವೋ ಅವುಗಳಿಗೆ ಕೇಶ ಎಂದು ಹೆಸರು.' ಆದುದರಿಂದ ನನ್ನನ್ನು ಸರ್ವಜ್ಞರಾದ ದ್ವಿಜಶ್ರೇಷ್ಠರು ಕೇಶವ ಎಂದು ಕರೆಯುತ್ತಾರೆ (ಮಹಾ. ಶಾಂತಿ. ೩೪೧. ೪೮).

೬೪೯. **ಕೇಶಿಹಾ**—ಕೇಶಿ ಎಂಬ ಹೆಸರಿನ ಅಸುರನನ್ನು ಕೊಂದವನು.

೬೫೦. **ಹರಿಃ**—ಸಂಸಾರವನ್ನು ಕಾರಣಸಮೇತವಾಗಿ ನಾಶಮಾಡುವವನು.

೬೫೧. **ಕಾಮದೇವಃ**—ಕಾಮನೂ ದೇವನೂ ಆಗಿರುವವನು.

ಧರ್ಮವೇ ಮೊದಲಾದ ನಾಲ್ಕು ಪುರುಷಾರ್ಥಗಳನ್ನು ಇಚ್ಛಿಸುವವರಿಂದ ಭಗವಂತನು ಬಯಸಲ್ಪಡುತ್ತಾನೆ. ಆದುದರಿಂದ ಅವನಿಗೆ ಕಾಮ ಎಂದು ಹೇಳುತ್ತಾರೆ. ಕಾಮನೂ ದೇವನೂ ಆದುದರಿಂದ ಭಗವಂತನು ಕಾಮದೇವನು.

೬೫೨. **ಕಾಮಪಾಲಃ** — ಕಾಮಿಗಳ ಕಾಮಗಳನ್ನು ಅನುಗ್ರಹಿಸಿ ಪಾಲಿಸುವವನು.

೬೫೩. **ಕಾಮೀ**—ಸ್ವಭಾವತಃ ಪೂರ್ಣಕಾಮನಾಗಿರುವವನು.

೬೫೪. **ಕಾಂತಃ**—ರೂಪಾತಿಶಯವುಳ್ಳ ದೇಹವನ್ನು ಧರಿಸಿದವನು.

ಅಥವಾ ಬ್ರಹ್ಮನ (ಕ = ಬ್ರಹ್ಮ) ನೂರುವರ್ಷದ ಕೊನೆಯಲ್ಲಿ ಬ್ರಹ್ಮನನ್ನೂ ನಾಶಮಾಡುವವನು.

೬೫೫. **ಕೃತಾಗಮಃ**—ಶ್ರುತಿಸ್ಮೃತಿಗಳೇ ಮೊದಲಾದ ಆಗಮಗಳನ್ನು ರಚಿಸಿದವನು.

'ಶ್ರುತಿಸ್ಮೃತೀ ಮಮೈವಾಜ್ಞೇ' 'ಶ್ರುತಿಸ್ಮೃತಿಗಳು ನನ್ನವೇ ಆಜ್ಞೆಗಳು' (ಭಗವದ್ವಚನ). 'ವೇದಾಃ ಶಾಸ್ತ್ರಾಣಿ ವಿಜ್ಞಾನಮೇತತ್ ಸರ್ವಂ ಜನಾರ್ದನಾತ್' ವೇದಗಳು ಶಾಸ್ತ್ರಗಳು ಮತ್ತು ವಿಜ್ಞಾನ—ಇದೆಲ್ಲವೂ ಜನಾರ್ದನನಿಂದ ಹುಟ್ಟಿದೆ' (ವಿಷ್ಣು. ಸ. ೧೩೯).

೬೫೬. **ಅನಿರ್ದೇಶ್ಯವಪುಃ**—ನಿರ್ದೇಶಿಸಲು ಅಸಾಧ್ಯವಾದ ರೂಪವುಳ್ಳವನು.

ಭಗವಂತನ ರೂಪವು ತ್ರಿಗುಣಗಳಿಗೆ ಅತೀತವಾದುದು. ಆದುದರಿಂದ ಅದನ್ನು ಇದು ಅದು ಅಥವಾ ಇಂತಹದು ಎಂದು ನಿರ್ದೇಶಿಸಲು ಸಾಧ್ಯವಿಲ್ಲ. ಆದುದರಿಂದ ಭಗವಂತನು ಅನಿರ್ದೇಶ್ಯವಪು.

೬೫೭. **ವಿಷ್ಣುಃ**—ತನ್ನ ಅತಿಶಯವಾದ ಕಾಂತಿಯಿಂದ ಭೂವ್ಯೋಮಾಕಾಶಗಳನ್ನು ವ್ಯಾಪಿಸಿರುವವನು.

'ವ್ಯಾಪ್ಯ ಮೇ ರೋದಸಿ ಪಾರ್ಥ....ವಿಷ್ಣುರಿತ್ಯಭಿಸಂಜ್ಞಿತಃ' 'ಎಲೈ ಪಾರ್ಥನೆ, ನನ್ನ ಪ್ರಚುರವಾದ ಕಾಂತಿಯು ಭೂವ್ಯೋಮಾಕಾಶಗಳನ್ನು ವ್ಯಾಪಿಸಿದೆಯಾದುದರಿಂದ ಅಥವಾ ನಾನು ಸರ್ವಗತನಾದುದರಿಂದ ನನ್ನನ್ನು ವಿಷ್ಣು ಎಂದು ಕರೆಯುತ್ತಾರೆ.' (ಮಹಾ. ಶಾಂತಿ. ೩೪೧. ೪೨. ೪೩).

೬೫೮. **ವೀರಃ**—ಗತಿ ವ್ಯಾಪ್ತಿ ಪ್ರಜನ ಕಾಂತಿ ಅಸ್ತಿತ್ವ ಮತ್ತು ಪ್ರಳಯ—ಈ ಧರ್ಮಗಳುಳ್ಳವನು.

೬೫೯. **ಅನಂತಃ**—ದೇಶತಃ ಕಾಲತಃ ಮತ್ತು ವಸ್ತುತಃ ಅಪರಿಚ್ಛಿನ್ನನಾಗಿರುವವನು.

ಭಗವಂತನು ಸರ್ವವ್ಯಾಪಿಯೂ ನಿತ್ಯನೂ ಮತ್ತು ಸರ್ವಾತ್ಮನೂ ಆಗಿರುವುದರಿಂದ ದೇಶತಃ ಕಾಲತಃ ಮತ್ತು ವಸ್ತುತಃ ಅಪರಿಚ್ಛಿನ್ನನು. ಆದುದರಿಂದ ಅವನಿಗೆ ಅನಂತ ಎಂದು ಹೆಸರು.

'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಬ್ರಹ್ಮವು ಸತ್ಯವೂ ಜ್ಞಾನವೂ ಅನಂತವೂ (ಆಗಿರುವುದು)' (ತೈ.ಉ. ೨.೧). 'ಗಂಧರ್ವಾಪ್ಸರಸಃ ಸಿದ್ಧಾಃ.... ತೇನಾನಂತೋಽಯಮವ್ಯಯಃ' 'ಗಂಧರ್ವರು ಅಪ್ಸರೆಯರು ಸಿದ್ಧರು ಕಿನ್ನರರು ಉರಗರು ಮತ್ತು ಚಾರಣರು–ಇವರು ಯಾರೂ ಭಗವಂತನ ಗುಣಗಳ ಕೊನೆಯನ್ನು ಮುಟ್ಟಲಾರರು. ಆದುದರಿಂದ ಈ ಅವ್ಯಯನಾದ ಭಗವಂತನು ಅನಂತನು' (ವಿಷ್ಣು. ೨.೫.೨೪).

**೬೬೦. ಧನಂಜಯಃ**—ಧನಂಜಯನು.

ದಿಗ್ವಿಜಯದಲ್ಲಿ ಹೇರಳವಾದ ಧನವನ್ನು ಜಯಿಸಿದ್ದರಿಂದ ಅರ್ಜುನನಿಗೆ ಧನಂಜಯ ಎಂದು ಹೆಸರು.

'ಪಾಂಡವಾನಾಂ ಧನಂಜಯಃ' 'ಪಾಂಡವರಲ್ಲಿ ನಾನು ಧನಂಜಯನು' (ಗೀತಾ. ೧೦. ೩೭) ಎಂದು ಭಗವಂತನು ಗೀತೆಯಲ್ಲಿ ಹೇಳಿರುವನಾದುದರಿಂದ ಅವನಿಗೂ ಧನಂಜಯ ಎಂದು ಹೆಸರು.

**೬೬೧. ಬ್ರಹ್ಮಣ್ಯಃ** — ತಪಸ್ಸು ವೇದಗಳು ಬ್ರಾಹ್ಮಣರು ಮತ್ತು ಜ್ಞಾನ—ಇವುಗಳಿಗೆ ಹಿತವಾಗಿರುವವನು.

ತಪಸ್ಸು ವೇದಗಳು ಬ್ರಾಹ್ಮಣರು ಮತ್ತು ಜ್ಞಾನ-ಇವುಗಳಿಗೆ ಬ್ರಹ್ಮ ಎಂದು ಹೇಳುತ್ತಾರೆ. ಭಗವಂತನು ಇವುಗಳಿಗೆ ಹಿತವಾಗಿರುವುದರಿಂದ ಅವನಿಗೆ ಬ್ರಹ್ಮಣ್ಯ ಎಂದು ಹೆಸರು.

**೬೬೨. ಬ್ರಹ್ಮಕೃತ್**-ತಪಸ್ಸು ಮೊದಲಾದುವುಗಳನ್ನು ಮಾಡುವವನು.

**೬೬೩. ಬ್ರಹ್ಮಾ**—ಬ್ರಹ್ಮನಾಗಿ ಎಲ್ಲವನ್ನೂ ಸೃಷ್ಟಿಸುವವನು.

**೬೬೪. ಬ್ರಹ್ಮ**—ಸತ್ಯಾದಿಲಕ್ಷಣವುಳ್ಳ ಬ್ರಹ್ಮವಾಗಿರುವವನು.

ಭಗವಂತನು ತಾನು ದೊಡ್ಡವನೂ ಇತರರನ್ನು ದೊಡ್ಡವರನ್ನಾಗಿ ಮಾಡುವವನೂ ಆಗಿರುವನಾದುದರಿಂದ ಅವನು ಸತ್ಯಾದಿಲಕ್ಷಣವುಳ್ಳ ಬ್ರಹ್ಮವಾಗಿರುವನು.

'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಬ್ರಹ್ಮವು ಸತ್ಯವೂ ಜ್ಞಾನವೂ ಅನಂತವೂ (ಆಗಿರುವುದು)' (ತೈ. ಉ. ೨.೧) 'ಪ್ರತ್ಯಸ್ತಮಿತಭೇದಂ ಯತ್....ತಜ್ಜ್ಞಾನಂ ಬ್ರಹ್ಮಸಂಜ್ಞಿತಮ್' 'ಸರ್ವಭೇದಗಳಿಂದ ರಹಿತವೂ ಸತ್ತಾಮಾತ್ರವೂ ವಾಕ್ಕುಗಳಿಗೆ ಅಗೋಚರವೂ ಮತ್ತು ಆತ್ಮಸಂವೇದ್ಯವೂ ಆಗಿರುವ ಯಾವ ಜ್ಞಾನವುಂಟೋ ಅದು ಬ್ರಹ್ಮ ಎಂದು ಕರೆಯಲ್ಪಡುತ್ತದೆ' (ವಿಷ್ಣು. ೬.೭.೫೩).

**೬೬೫. ಬ್ರಹ್ಮವಿವರ್ಧನಃ**—ತಪಸ್ಸು ಮೊದಲಾದುವುಗಳನ್ನು ವೃದ್ಧಿಗೊಳಿಸುವವನು.

**೬೬೬. ಬ್ರಹ್ಮವಿತ್**-ವೇದಗಳನ್ನೂ ವೇದಾರ್ಥವನ್ನೂ ಯಥಾವತ್ತಾಗಿ ತಿಳಿದವನು.

೬೬೭. ಬ್ರಾಹ್ಮಣಃ—ಬ್ರಾಹ್ಮಣರೂಪದಿಂದ ಸಮಸ್ತ ಜನರಿಗೆ ವೇದವನ್ನು ಕಲಿಸುವವನು.

೬೬೮. ಬ್ರಹ್ಮೀ — ತನ್ನ ಶೇಷಭೂತಗಳನ್ನು ತನ್ನಲ್ಲಿಯೇ ಧರಿಸಿಕೊಂಡಿರುವವನು.

ಬ್ರಹ್ಮ ಎಂದು ಕರೆಯಲ್ಪಡುವ ತಪಸ್ಸುವೇದಗಳೇ ಇತ್ಯಾದಿ ಭಗವಂತನ ಶೇಷಭೂತಗಳು ಭಗವಂತನಲ್ಲಿಯೇ ಇವೆ. ಆದುದರಿಂದ ಭಗವಂತನಿಗೆ ಬ್ರಹ್ಮೀ ಎಂದು ಹೆಸರು.

೬೬೯. ಬ್ರಹ್ಮಜ್ಞಃ—ಸ್ವಾತ್ಮಭೂತಗಳಾದ ವೇದಗಳನ್ನು ತಿಳಿದಿರುವವನು.

೬೭೦. ಬ್ರಾಹ್ಮಣಪ್ರಿಯಃ—ಬ್ರಾಹ್ಮಣರಿಗೆ ಪ್ರಿಯನಾಗಿರುವವನು.

ಅಥವಾ ಬ್ರಾಹ್ಮಣರು ಭಗವಂತನಿಗೆ ಪ್ರಿಯರಾದವರು. ಆದುದರಿಂದ ಭಗವಂತನಿಗೆ ಬ್ರಾಹ್ಮಣಪ್ರಿಯ ಎಂದು ಹೆಸರು.

೬೭೧. ಮಹಾಕ್ರಮಃ—ದೊಡ್ಡದಾದ ಹೆಜ್ಜೆಗಳುಳ್ಳವನು.

'ಶಂ ನೋ ವಿಷ್ಣುರುರುಕ್ರಮಃ' ದೊಡ್ಡದಾದ ಹೆಜ್ಜೆಗಳುಳ್ಳ ವಿಷ್ಣುವು ನಮಗೆ ಶಾಂತಿಯನ್ನು ಕೊಡಲಿ.' (ಶುಕ್ಲ ಯಜು. ೪೬.೯).

೬೭೨. ಮಹಾಕರ್ಮಾ—ಜಗತ್‌ಸೃಷ್ಟಿಯೇ ಮೊದಲಾದ ಮಹತ್ತಾದ ಕರ್ಮಗಳುಳ್ಳವನು.

೬೭೩. ಮಹಾತೇಜಾಃ—ಮಹತ್ತಾದ ತೇಜಸ್ಸುಳ್ಳವನು.

ಯಾವನ ತೇಜಸ್ಸಿನಿಂದ ಸೂರ್ಯಾದಿಗಳು ತೇಜಸ್ವಿಗಳಾಗಿರುವರೋ ಆ ಭಗವಂತನ ತೇಜಸ್ಸು ಮಹತ್ತಾದುದು. ಆದುದರಿಂದ ಭಗವಂತನಿಗೆ ಮಹಾತೇಜಾ ಎಂದು ಹೆಸರು. ಅಥವಾ ಭಗವಂತನು ಕ್ರೌರ್ಯ ಮತ್ತು ಶೌರ್ಯ ಮೊದಲಾದ ಮಹದ್ಗುಣಗಳಿಂದ ಸಮಲಂಕೃತನಾಗಿರುವವನಾದುದರಿಂದ ಅವನಿಗೆ ಮಹಾತೇಜಾ ಎಂದು ಹೆಸರು.

'ಯದಾದಿತ್ಯಗತಂ ತೇಜೋ....ತತ್ತೇಜೋ ವಿದ್ಧಿ ಮಾಮಕಮ್' 'ಸೂರ್ಯನಲ್ಲಿರುವ ಯಾವ ತೇಜಸ್ಸು ಅಖಿಲಜಗತ್ತನ್ನು ಪ್ರಕಾಶಪಡಿಸುತ್ತದೋ, ಚಂದ್ರನಲ್ಲಿ ಮತ್ತು ಅಗ್ನಿಯಲ್ಲಿ ಯಾವ ತೇಜಸ್ಸುಂಟೋ ಆ ತೇಜಸ್ಸು ನನ್ನದೆಂದು ತಿಳಿ' (ಗೀತಾ. ೧೫. ೧೨).

೬೭೪. ಮಹೋರಗಃ-(ವಾಸುಕಿ ಎಂಬ) ಮಹಾಸರ್ಪವಾಗಿರುವವನು.

'ಸರ್ಪಾಣಾಮಸ್ಮಿ ವಾಸುಕಿಃ' 'ಸರ್ಪಗಳಲ್ಲಿ ನಾನು ವಾಸುಕಿಯಾಗಿದ್ದೇನೆ' (ಗೀತಾ. ೧೦. ೨೮).

೬೭೫. ಮಹಾಕ್ರತುಃ—ಮಹಾಯಜ್ಞವಾಗಿರುವವನು.

ಯಜ್ಞಗಳಲ್ಲಿ ಅಶ್ವಮೇಧಯಜ್ಞವು ಶ್ರೇಷ್ಠವಾದುದು. ಭಗವಂತನೇ ಈ ಅಶ್ವಮೇಧಯಜ್ಞವಾಗಿರುವನಾದುದರಿಂದ ಭಗವಂತನನ್ನು ಮಹಾಕ್ರತು ಎಂದು ಸ್ತುತಿಸುತ್ತಾರೆ.

**೬೭೬. ಮಹಾಯಜ್ವಾ**—ಲೋಕಸಂಗ್ರಹಾರ್ಥವಾಗಿ ಯಜ್ಞಗಳನ್ನು ಮಾಡುವ ಮಹಾಪುರುಷನು.

**೬೭೭. ಮಹಾಯಜ್ಞಃ**—ಶ್ರೇಷ್ಠವಾದ ಯಜ್ಞವಾಗಿರುವವನು.

'ಯಜ್ಞಾನಾಂ ಜಪಯಜ್ಞೋಽಸ್ಮಿ' 'ಯಜ್ಞಗಳಲ್ಲಿ ನಾನು ಜಪಯಜ್ಞವಾಗಿದ್ದೇನೆ' (ಗೀತಾ. ೧೦.೨೫).

**೬೭೮. ಮಹಾಹವಿಃ**—ಮಹತ್ತಾದ ಹವಿಸ್ಸಾಗಿರುವವನು.

ಬ್ರಹ್ಮಾತ್ಮದಲ್ಲಿ ಇಡೀ ಜಗತ್ತು ಬ್ರಹ್ಮಭಾವದಿಂದ ಹವಿಸ್ಸಾಗಿ ಅರ್ಪಿಸಲ್ಪಡುತ್ತದೆ. ಆದುದರಿಂದ ಭಗವಂತನಿಗೆ ಮಹಾಹವಿ ಎಂದು ಹೆಸರು.

**೬೭೯. ಸ್ತವ್ಯಃ**—ಎಲ್ಲರಿಂದ ಸ್ತುತಿಸಲ್ಪಡುವವನು.

ಭಗವಂತನು ಸರ್ವರಿಂದ ಸ್ತುತಿಸಲ್ಪಡುವವನು ; ತಾನು ಯಾರನ್ನೂ ಸ್ತುತಿಸುವವನಲ್ಲ. ಆದುದರಿಂದ ಅವನಿಗೆ ಸ್ತವ್ಯ ಎಂದು ಹೆಸರು.

**೬೮೦. ಸ್ತವಪ್ರಿಯಃ**—ಸ್ತವಪ್ರಿಯನು.

ಭಗವಂತನನ್ನು ಎಲ್ಲರೂ ಸ್ತುತಿಸುತ್ತಾರೆ. ಆದುದರಿಂದಲೇ ಭಗವಂತನು ಸ್ತವಪ್ರಿಯನು.

**೬೮೧. ಸ್ತೋತ್ರಮ್**—ಗುಣಸಂಕೀರ್ತನಾರೂಪವಾದ ಸ್ತೋತ್ರವಾಗಿರುವವನು.

ಭಗವಂತನು ಯಾವುದರ ಮೂಲಕ ಸ್ತುತಿಸಲ್ಪಡುತ್ತಾನೋ ಅದೇ ಸ್ತೋತ್ರವು. ಗುಣಸಂಕೀರ್ತನಾರೂಪವಾದ ಆ ಸ್ತೋತ್ರವೂ ಭಗವಂತನೇ ಆಗಿರುವನು. ಆದುದರಿಂದ ಅವನಿಗೆ ಸ್ತೋತ್ರ ಎಂದು ಹೆಸರು.

**೬೮೨. ಸ್ತುತಿಃ**—ಸ್ತವನಕ್ರಿಯೆಯಾಗಿರುವವನು.

ಸ್ತವನಕ್ರಿಯೆಯೂ ಭಗವಂತನೇ ಆಗಿರುವನು. ಆದುದರಿಂದ ಅವನಿಗೆ ಸ್ತುತಿ ಎಂದು ಹೆಸರು.

**೬೮೩. ಸ್ತೋತಾ**—ಸ್ತುತಿಸುವವನು.

ಸ್ತುತಿಸುವವನೂ ಭಗವಂತನೇ ಆಗಿರುವನು. ಆದುದರಿಂದ ಭಗವಂತನು ಸ್ತೋತೃವು.

**೬೮೪. ರಣಪ್ರಿಯಃ**—ಯುದ್ಧವು ತನಗೆ ಪ್ರಿಯವಾಗಿ ಉಳ್ಳವನು.

ಭಗವಂತನಿಗೆ ಯುದ್ಧವು ಪ್ರಿಯವಾದುದು. ಅವನು ಲೋಕರಕ್ಷಣಾರ್ಥವಾಗಿ ನಿತ್ಯವೂ ಪಂಚಮಹಾಯುಧಗಳನ್ನು ಧರಿಸುತ್ತಾನೆ. ಆದುದರಿಂದ ಅವನಿಗೆ ರಣಪ್ರಿಯ ಎಂದು ಹೆಸರು.

**೬೮೫. ಪೂರ್ಣಃ**—ಸಕಲ ಬಯಕೆಗಳಿಂದಲೂ ಸಕಲ ಶಕ್ತಿಗಳಿಂದಲೂ ಸಂಪನ್ನನಾಗಿರುವವನು.

**೬೮೬. ಪೂರಯಿತಾ**—ಎಲ್ಲರನ್ನೂ ಪೂರ್ಣಮಾಡುವವನು.

ಭಗವಂತನು ಕೇವಲ ಪೂರ್ಣನು ಮಾತ್ರವಲ್ಲ; ಎಲ್ಲರನ್ನೂ ಸಂಪತ್ತುಗಳಿಂದ ಪೂರ್ಣಮಾಡುವವನೂ ಆಗಿರುವನು. ಆದುದರಿಂದ ಅವನಿಗೆ ಪೂರಯಿತಾ ಎಂದು ಹೆಸರು.

**೬೮೭. ಪುಣ್ಯಃ**—ಸ್ಮರಣಮಾತ್ರದಿಂದಲೇ ಕಲ್ಮಷಗಳನ್ನೆಲ್ಲ ನಾಶಮಾಡುವವನು.

**೬೮೮. ಪುಣ್ಯಕೀರ್ತಿಃ**—ಪವಿತ್ರವಾದ ಕೀರ್ತಿಯುಳ್ಳವನು.

ಭಗವಂತನ ಕೀರ್ತಿಯು ಪವಿತ್ರವಾದುದು. ಅದು ಮನುಷ್ಯರಿಗೆ ಪುಣ್ಯವನ್ನು ತರುತ್ತದೆ. ಆದುದರಿಂದ ಭಗವಂತನಿಗೆ ಪುಣ್ಯಕೀರ್ತಿಯೆಂದು ಹೆಸರು.

**೬೮೯. ಅನಾಮಯಃ**—ಕರ್ಮಗಳಿಂದ ಹುಟ್ಟಿದ ಆಂತರಿಕ ವ್ಯಾಧಿಗಳಿಂದ ಅಥವಾ ಬಾಹ್ಯವ್ಯಾಧಿಗಳಿಂದ ಪೀಡಿಸಲ್ಪಡದೇ ಇರುವವನು.

**೬೯೦. ಮನೋಜವಃ**—ಮನಸ್ಸಿನ ವೇಗಕ್ಕೆ ಸಮಾನವಾದ ವೇಗವುಳ್ಳವನು.

ಭಗವಂತನು ಸರ್ವವ್ಯಾಪಿಯಾದುದರಿಂದ ಮನಸ್ಸಿನ ವೇಗಕ್ಕೆ ಸಮಾನವಾದ ವೇಗವುಳ್ಳವನಾಗಿರುವನು. ಆದುದರಿಂದ ಅವನು ಮನೋಜವನು.

**೬೯೧. ತೀರ್ಥಕರಃ**—ಎಲ್ಲ ವಿದ್ಯೆಗಳ ಕರ್ತೃವೂ ವಕ್ತೃವೂ ಆಗಿರುವವನು.

ಭಗವಂತನು ಹದಿನಾಲ್ಕು ವೈದಿಕವಿದ್ಯೆಗಳ ಮತ್ತು ವೇದಬಾಹ್ಯವಿದ್ಯೆಗಳ ಸಿದ್ಧಾಂತಗಳ ಕರ್ತೃವೂ ವಕ್ತೃವೂ ಆಗಿರುವನಾದುದರಿಂದ ಅವನಿಗೆ ತೀರ್ಥಕರ ಎಂದು ಹೆಸರು. ಭಗವಂತನು ಹಯಗ್ರೀವರೂಪದಿಂದ ಮಧು ಮತ್ತು ಕೈಟಭ ಎಂಬ ಅಸುರರನ್ನು ಕೊಂಡು ಬ್ರಹ್ಮನಿಗೆ ಸೃಷ್ಟ್ಯಾದಿಯಲ್ಲಿ ಸರ್ವಶಾಸ್ತ್ರಗಳನ್ನೂ ಅನ್ಯವಿದ್ಯೆಗಳನ್ನೂ ಉಪದೇಶಿಸಿ, ಸುರವೈರಿಗಳ ವಂಚನೆಗಾಗಿ ವೇದಬಾಹ್ಯವಾದ ವಿದ್ಯೆಗಳನ್ನು ಕೂಡ ಉಪದೇಶಿಸಿದನು ಎಂದು ಪೌರಾಣಿಕರು ಹೇಳುತ್ತಾರೆ.

**೬೯೨. ವಸುರೇತಾಃ**—ಸುವರ್ಣವು ತನ್ನ ರೇತಸ್ಸಾಗಿ ಉಳ್ಳವನು.

ಭಗವಂತನು ಮೊದಲು ಜಲವನ್ನು ಸೃಷ್ಟಿಸಿ ಅದಲ್ಲಿ ವೀರ್ಯವನ್ನು ಬಿಟ್ಟನು. ಅದು ಬ್ರಹ್ಮನ ಉತ್ಪತ್ತಿಗೆ ಪರಮಶ್ರೇಷ್ಠಕಾರಣವಾದ ಹಿರಣ್ಮಯವಾದ ಅಂಡವಾಯಿತು (ವ್ಯಾಸವಚನ).

**೬೯೩. ವಸುಪ್ರದಃ**—ಧನವನ್ನು ಪ್ರಕೃಷ್ಟವಾಗಿ (ಅತಿಶಯವಾಗಿ) ದಾನಮಾಡುವವನು.

ಭಗವಂತನು ಸಾಕ್ಷಾತ್ ಧನಾಧ್ಯಕ್ಷನು. ಕುಬೇರಾದಿ ಇತರರಾದರೊ ಅವನ ಅನುಗ್ರಹದಿಂದ ಮಾತ್ರವೇ ಧನಾಧ್ಯಕ್ಷರಾಗಿರುವರು.

**೬೯೪. ವಸುಪ್ರದಃ**—ಮೋಕ್ಷವೆಂಬ ಪ್ರಕೃಷ್ಟವಾದ ಫಲವನ್ನು ಭಕ್ತರಿಗೆ ಕೊಡುವವನು.

ಅಥವಾ ದೇವಶತ್ರುಗಳ ಧನಗಳನ್ನು ಅಧಿಕವಾಗಿ ನಾಶಮಾಡುವವನು.

**೬೯೫. ವಾಸುದೇವಃ**—ವಸುದೇವನ ಮಗನಾಗಿ ಹುಟ್ಟಿದವನು.

**೬೯೬. ವಸುಃ**—ಸರ್ವಭೂತಗಳಿಗೆ ವಾಸಸ್ಥಾನವಾಗಿರುವವನು.

ಅಥವಾ ಭಗವಂತನು ಸರ್ವಭೂತಗಳಲ್ಲಿ ವಾಸಮಾಡುವವನಾದುದರಿಂದ ವಸುವು.

**೬೯೭. ವಸುಮನಾಃ** — ಸರ್ವವಸ್ತುಗಳಲ್ಲಿ ಸಮಾನಭಾವದಿಂದ ವಾಸಮಾಡುವಂತಹ ಮನಸ್ಸುಳ್ಳವನು.

**೬೯೮. ಹವಿಃ**—ಹವಿಸ್ಸಾಗಿರುವವನು.

'ಬ್ರಹ್ಮಾರ್ಪಣಂ ಬ್ರಹ್ಮಹವಿಃ....' 'ಅರ್ಪಣವು ಬ್ರಹ್ಮ, ಹವಿಸ್ಸು ಬ್ರಹ್ಮ....' (ಗೀತಾ. ೪. ೨೪).

**೬೯೯. ಸದ್ಗತಿಃ**—ಸಂತರಿಂದ ಹೊಂದಲ್ಪಡುವವನು.

ಯಾರು ಪರಮಾತ್ಮನು ಇದ್ದಾನೆಂದು ತಿಳಿಯುತ್ತಾರೋ ಅವರಿಗೆ ಸಂತರು ಎಂದು ಹೇಳುತ್ತಾರೆ. ಸಂತರು ಭಗವಂತನನ್ನು ಹೊಂದುತ್ತಾರೆ. ಆದುದರಿಂದ ಭಗವಂತನಿಗೆ ಸದ್ಗತಿ ಎಂದು ಹೆಸರು. ಅಥವಾ ಭಗವಂತನು ಉತ್ಕೃಷ್ಟವಾದ ಬುದ್ಧಿಯುಳ್ಳವನಾದುದರಿಂದ ಅವನಿಗೆ ಸದ್ಗತಿ ಎಂದು ಹೇಳುತ್ತಾರೆ.

**೭೦೦. ಸತ್ಕೃತಿಃ**—ಜಗದ್ರಕ್ಷಣಾರೂಪವಾದ ಶ್ರೇಷ್ಠವಾದ ಕೃತಿಯುಳ್ಳವನು.

**೭೦೧. ಸತ್ತಾ**—ಸತ್ತಾಸ್ವರೂಪನಾಗಿರುವವನು.

ಸಜಾತೀಯ ವಿಜಾತೀಯ ಮತ್ತು ಸ್ವಗತ ಭೇದಗಳಿಲ್ಲದ ಅನುಭೂತಿಯೇ ಸತ್ತಾ.

**೭೦೨. ಸದ್ಭೂತಿಃ**—ಸತ್ಸ್ವರೂಪನೂ ಚಿದಾತ್ಮಕನೂ ಆಗಿರುವವನು.

ಸತ್ಸ್ವರೂಪನೂ ಚಿದಾತ್ಮಕನೂ ಆಗಿರುವ ಪರಮಾತ್ಮನೇ (ಅವನು ಬಾಧಾರಹಿತನೂ ಭಾಸಮಾನನೂ ಆಗಿರುವುದರಿಂದ) ಸದ್ಭೂತಿಯಾಗಿರುವನು; ಅನ್ಯರು ಯಾರೂ ಅಲ್ಲ. ಜ್ಞಾನೇಂದ್ರಿಯಗಳಿಗೆ ಗೋಚರವಾಗುವ ಜಗತ್ತು ಬಾಧ್ಯಮಾನವಾಗಿರುವುದರಿಂದ ಅದು 'ಸತ್' ಅಲ್ಲ, 'ಅಸತ್' ಕೂಡ ಅಲ್ಲ.

**೭೦೩. ಸತ್ಪರಾಯಣಃ**—ತತ್ತ್ವವಿದರಿಗೆ ಪರಮಶ್ರೇಷ್ಠವಾದ ಗುರಿಯಾಗಿರುವವನು.

೨೦೪. **ಶೂರಸೇನಃ**—ಹನುಮಂತನೇ ಮೊದಲಾದ ಪ್ರಮುಖರಾದ ಶೌರ್ಯಶಾಲಿಗಳಾದ ಸೈನಿಕರಿರುವ ಸೇನೆಯುಳ್ಳವನು.

೨೦೫. **ಯದುಶ್ರೇಷ್ಠಃ**—ಯಾದವರಲ್ಲಿ ಅಗ್ರಗಣ್ಯನು.

೨೦೬. **ಸನ್ನಿವಾಸಃ**—ವಿದ್ವಾಂಸರಿಗೆ ಆಶ್ರಯವಾಗಿರುವವನು.

೨೦೭. **ಸುಯಾಮುನಃ**—ರೂಪವಂತರೂ ಯಮುನಾಸಂಬಂಧಿಗಳೂ ತನ್ನ ಪರಿವಾರದವರಾಗಿ ಇದ್ದವನು.

ರೂಪವಂತರಾದ ಯಮುನಾಸಂಬಂಧಿಗಳಾದ ದೇವಕೀ ವಸುದೇವ ನಂದ ಯಶೋದಾ ಬಲಭದ್ರ ಮತ್ತು ಸುಭದ್ರಾ ಮೊದಲಾದವರು ಭಗವಂತನಿಗೆ ಪರಿವಾರ ದವರಾಗಿ ಇದ್ದರು. ಆದುದರಿಂದ ಅವನಿಗೆ ಸುಯಾಮುನ ಎಂದು ಹೆಸರು. ಅಥವಾ ರೂಪವಂತರಾದ ಬ್ರಹ್ಮಾದಿಗಳು ಗೋಪವೇಷಧಾರಿಗಳೂ ಯಮುನಾ ಸಂಬಂಧಿಗಳೂ ಆಗಿ ಭಗವಂತನ ಪರಿವಾರದವರಾಗಿದ್ದರು. ಆದುದರಿಂದ ಭಗವಂತನಿಗೆ ಸುಯಾಮುನ ಎಂದು ಹೆಸರು.

೨೦೮. **ಭೂತಾವಾಸಃ**—ಭೂತಗಳಿಗೆಲ್ಲ ಮುಖ್ಯವಾದ ವಾಸಸ್ಥಾನ ವಾಗಿರುವವನು.

'ವಸಂತಿ ತ್ವಯಿ ಭೂತಾನಿ ಭೂತಾವಾಸಸ್ತತೋ ಭವಾನ್' 'ನಿನ್ನಲ್ಲಿ ಭೂತ ಗಳು ವಾಸಮಾಡುತ್ತವೆ. ಆದುದರಿಂದ ನೀನು ಭೂತಾವಾಸನು' (ಹರಿ).

೨೦೯. **ವಾಸುದೇವಃ**—ವಾಸುದೇವನು. (ಜಗತ್ತನ್ನು ತನ್ನ ಮಾಯೆ ಯಿಂದ ಮುಚ್ಚಿರುವವನೂ, ದೇವನೂ ಆಗಿರುವವನು.)

'ಛಾದಯಾಮಿ ಜಗದ್ ವಿಶ್ವಂ ಭೂತ್ವಾ ಸೂರ್ಯ ಇವಾಂಶುಭಿಃ' 'ಸೂರ್ಯನು ಕಿರಣಗಳಿಂದ ಹೇಗೋ ಹಾಗೆಯೇ ನಾನು ಇಡೀ ಜಗತ್ತನ್ನು ನನ್ನ ವಿಭೂತಿಯಿಂದ ಮುಚ್ಚುತ್ತೇನೆ' (ಮಹಾ. ಶಾಂತಿ. ೩೮೧. ೪೧).

೨೧೦. **ಸರ್ವಾಸುನಿಲಯಃ**—ಸರ್ವಪ್ರಾಣಿಗಳಿಗೆ ಆಶ್ರಯಸ್ಥಾನವಾ ಗಿರುವವನು.

ಸರ್ವಪ್ರಾಣಗಳು ಜೀವಾತ್ಮರೂಪವಾದ ಆಶ್ರಯಸ್ಥಾನದಲ್ಲಿ (ಎಂದರೆ ಭಗವಂತ ನಲ್ಲಿ) ಲೀನವಾಗುತ್ತವೆ. ಆದುದರಿಂದ ಭಗವಂತನಿಗೆ ಸರ್ವಾಸುನಿಲಯ ಎಂದು ಹೇಳುತ್ತಾರೆ.

೨೧೧. **ಅನಲಃ**—ತನ್ನ ಶಕ್ತಿಸಂಪತ್ತುಗಳಿಗೆ ಪರ್ಯಾಪ್ತಿಯಿಲ್ಲದವನು.

೨೧೨. **ದರ್ಪಹಾ**—ಧರ್ಮವಿರುದ್ಧವಾದ ಮಾರ್ಗದಲ್ಲಿ ಇರುವವರ ದರ್ಪವನ್ನು ನಾಶಮಾಡುವವನು.

೨೧೩. **ದರ್ಪದಃ**—ಧರ್ಮಮಾರ್ಗದಲ್ಲಿ ವರ್ತಿಸುವವರಿಗೆ ಸದಹಂಕಾರ ವನ್ನು ಕೊಡುವವನು.

**೨೧೪. ದೃಪ್ತಃ**— ನಿತ್ಯವೂ ಸಂತುಷ್ಟನಾಗಿರುವವನು.

ಸ್ವಾತ್ಮಾಮೃತರಸಾಸ್ವಾದನೆಯಿಂದ ಭಗವಂತನು ನಿತ್ಯವೂ ಸಂತುಷ್ಟನಾಗಿರುವನಾದುದರಿಂದ ಅವನಿಗೆ ದೃಪ್ತ ಎಂದು ಹೆಸರು.

**೨೧೫. ದುರ್ಧರಃ**—(ಭಕ್ತರಿಂದ) ಬಹಳ ಕಷ್ಟದಿಂದ ಹೃದಯದಲ್ಲಿ ಧಾರಣಮಾಡಲ್ಪಡುವವನು.

ಭಗವಂತನು ಸರ್ವಉಪಾಧಿಗಳಿಂದ ರಹಿತನಾದುದರಿಂದ ಅವನನ್ನು ಪ್ರಣಿಧಾನಾದಿಗಳಲ್ಲಿ ಧಾರಣಮಾಡಲು ಅಸಾಧ್ಯವಾಗಿದ್ದರೂ, ಕೆಲವರು ಅವನ ಅನುಗ್ರಹದಿಂದ ಸಹಸ್ರಾರು ಜನ್ಮಗಳಲ್ಲಿ ಬಹಳ ಕಷ್ಟದಿಂದ ತಮ್ಮ ಹೃದಯದಲ್ಲಿ ಅವನನ್ನು ಧಾರಣಮಾಡುತ್ತಾರೆ. ಆದುದರಿಂದ ಅವನಿಗೆ ದುರ್ಧರ ಎಂದು ಹೆಸರು.

'ಕ್ಲೇಶೋಽಧಿಕತರಸ್ತೇಷಾಂ....ದೇಹವದ್ಭಿರವಾಪ್ಯತೇ' 'ಅವ್ಯಕ್ತದಲ್ಲಿ ಆಸಕ್ತವಾದ ಮನಸ್ಸುಳ್ಳವರ ಕ್ಲೇಶವು ಅಧಿಕತರವಾದುದು. ದೇಹಧಾರಿಗಳಿಂದ (ಅಕ್ಷರಾತ್ಮಕವಾದ) ಅವ್ಯಕ್ತಗತಿಯು ಬಹಳ ಕಷ್ಟದಿಂದ ಹೊಂದಲ್ಪಡುತ್ತದೆ' (ಗೀತಾ. ೧೨.೫).

**೨೧೬. ಅಪರಾಜಿತಃ**—ರಾಗಾದಿ ಆಂತರಿಕಶತ್ರುಗಳಿಂದಾಗಲೀ ಅಥವಾ ದಾನವಾದಿ ಬಾಹ್ಯಶತ್ರುಗಳಿಂದಾಗಲೀ ಎಂದೂ ಪರಾಜಿತನಾಗದೆ ಇರುವವನು.

**೨೧೭. ವಿಶ್ವಮೂರ್ತಿಃ**—ವಿಶ್ವವು ತನ್ನ ಮೂರ್ತಿಯಾಗಿ ಉಳ್ಳವನು.

ಭಗವಂತನು ಸರ್ವಾತ್ಮಕನಾದುದರಿಂದ ವಿಶ್ವವು ಅವನ ಮೂರ್ತಿ. ಆದುದರಿಂದ ಭಗವಂತನಿಗೆ ವಿಶ್ವಮೂರ್ತಿ ಎಂದು ಹೆಸರು.

**೨೧೮. ಮಹಾಮೂರ್ತಿಃ**—ಮಹತ್ತಾದ ಮೂರ್ತಿಯುಳ್ಳವನು.

ಶೇಷಪರ್ಯಂಕದ ಮೇಲೆ ಶಯನಮಾಡಿರುವ ಭಗವಂತನ ಮೂರ್ತಿಯು ಮಹತ್ತಾದುದು. ಆದುದರಿಂದ ಅವನು ಮಹಾಮೂರ್ತಿ.

**೨೧೯. ದೀಪ್ತಮೂರ್ತಿಃ**—ಜ್ಞಾನಮಯವಾದ ಮೂರ್ತಿಯುಳ್ಳವನು.

ಅಥವಾ ಭಗವಂತನು ಸ್ವೇಚ್ಛೆಯಿಂದ ಗ್ರಹಿಸಿದ ತೈಜಸೀಮೂರ್ತಿಯು ಕಾಂತಿಯುಕ್ತವಾದುದು. ಆದುದರಿಂದ ಭಗವಂತನಿಗೆ ದೀಪ್ತಮೂರ್ತಿ ಎಂದು ಹೆಸರು.

**೨೨೦. ಅಮೂರ್ತಿಮಾನ್**—ಕರ್ಮಬದ್ಧವಾದ ಶರೀರವಿಲ್ಲದವನು.

**೨೨೧. ಅನೇಕಮೂರ್ತಿಃ**—ಲೋಕೋಪಕಾರಕ್ಕಾಗಿ ಅವತಾರಗಳಲ್ಲಿ ಸ್ವೇಚ್ಛೆಯಿಂದ ಅನೇಕ ರೂಪಗಳನ್ನು ಧರಿಸಿದವನು.

**೨೨೨. ಅವ್ಯಕ್ತಃ**—ಇಂಥವನೇ ಎಂದು ನಿರೂಪಿಸಲ್ಪಡಲು ಅಸಾಧ್ಯನಾಗಿರುವವನು.

ಭಗವಂತನಿಗೆ ಅನೇಕ ರೂಪಗಳಿದ್ದರೂ, ಅವನು ಇಂಥವನೇ ಎಂದು ನಿರೂಪಿಸಲ್ಪಡಲು ಅಸಾಧ್ಯನಾಗಿರುವನು. ಆದುದರಿಂದ ಅವನು ಅವ್ಯಕ್ತನು.

**೭೨೩. ಶತಮೂರ್ತಿಃ**—ವಿವಿಧರೂಪಗಳಿರುವವನು.

ಜ್ಞಾನಮೂರ್ತಿಯಾದ ಭಗವಂತನಿಗೆ ವಿವಿಧ ವಿಕಲ್ಪಜನ್ಯರೂಪಗಳಿವೆಯಾದುದರಿಂದ ಅವನು ಶತಮೂರ್ತಿಯು.

**೭೨೪. ಶತಾನನಃ**—ನೂರು ಮುಖಗಳಿರುವವನು.

ಭಗವಂತನಿಗೆ ವಿಶ್ವವೇ ಮೊದಲಾದ ಅನೇಕ ರೂಪಗಳಿವೆಯಾದುದರಿಂದ ಅವನು ಶತಾನನನು ಎಂದರೆ ನೂರು ಮುಖಗಳುಳ್ಳವನು.

**೭೨೫. ಏಕಃ**—ಒಬ್ಬನೇ ಆಗಿರುವವನು.

ಪಾರಮಾರ್ಥಿಕವಾಗಿ ಸಜಾತೀಯ ವಿಜಾತೀಯ ಮತ್ತು ಸ್ವಗತ ಭೇದಗಳಿಂದ ರಹಿತನಾದುದರಿಂದ ಪರಮಾತ್ಮನು ಒಬ್ಬನೇ ಒಬ್ಬನಾಗಿರುವನು. ಆದುದರಿಂದ ಅವನಿಗೆ ಏಕ ಎಂದು ಹೆಸರು.

**೭೨೬. ನೈಕಃ**—ಅನೇಕವಾಗಿರುವವನು.

ಭಗವಂತನು ಮಾಯೆಯಿಂದ ಅನೇಕ ರೂಪಗಳನ್ನು ಧರಿಸುತ್ತಾನೆ. ಆದುದರಿಂದ ಅವನು ನೈಕನು ಅಂದರೆ ಏಕನಲ್ಲ.

'ಇಂದ್ರೋ ಮಾಯಾಭಿಃ ಪುರುರೂಪ ಈಯತೇ' 'ಇಂದ್ರನು (ಪರಮೇಶ್ವರನು) ಮಾಯೆಗಳ ದ್ವಾರಾ ಅನೇಕ ರೂಪಗಳಿಂದ ಕಾಣುತ್ತಾನೆ.' (ಬೃ. ಉ. ೨. ೫. ೧೯).

**೭೨೭. ಸವಃ**—ಯಜ್ಞರೂಪನು.

ಯಾವ ಯಜ್ಞದಲ್ಲಿ ಸೋಮರಸವು ಹಿಂಡಲ್ಪಡುತ್ತದೋ ಆ ಯಜ್ಞಕ್ಕೆ ಸವ ಎಂದು ಹೆಸರು. ಭಗವಂತನು ಯಜ್ಞರೂಪನಾದುದರಿಂದ ಅವನಿಗೂ ಸವ ಎಂದು ಹೆಸರು.

**೭೨೮. ಕಃ**—ಸುಖರೂಪನು.

ಕ ಎಂದರೆ ಸುಖ ಎಂದು ಅರ್ಥ. ಭಗವಂತನು ಸುಖರೂಪನೆಂದು ಸ್ತುತಿಸಲ್ಪಡುತ್ತಾನೆ. ಆದುದರಿಂದ ಅವನಿಗೆ ಕ ಎಂದು ಹೆಸರು.

'ಕಂ ಬ್ರಹ್ಮ' 'ಬ್ರಹ್ಮವು ಸುಖವು' (ಛಾ. ಉ. ೪. ೧೦. ೫).

**೭೨೯. ಕಿಮ್**—ವಿಚಾರಿಸಲ್ಪಡತಕ್ಕವನು.

ಪರಮಾತ್ಮನು ಸರ್ವಪುರುಷಾರ್ಥರೂಪನಾದುದರಿಂದ ಅವನೊಬ್ಬನೇ ವಿಚಾರಿಸಲ್ಪಡತಕ್ಕವನು. ಆದುದರಿಂದ ಪರಮಾತ್ಮನಿಗೆ ಕಿಂ ಎಂದು ಹೆಸರು.

**೭೩೦. ಯತ್**—ಯತ್ ಶಬ್ದದಿಂದ ನಿರ್ದೇಶಿಸಲ್ಪಡುವವನು.

ಸ್ವತಃಸಿದ್ಧವಾದ ವಸ್ತುವನ್ನು ಸೂಚಿಸುವ ಯತ್ (ಯಾವುದು) ಶಬ್ದವು ಬ್ರಹ್ಮವನ್ನು ನಿರ್ದೇಶಿಸುತ್ತದೆ. ಆದುದರಿಂದ ಬ್ರಹ್ಮಕ್ಕೆ ಯತ್ ಎಂದು ಹೇಳುತ್ತಾರೆ.

'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಯಾವುದರಿಂದ (ಎಂದರೆ ಪರಮಾತ್ಮನಿಂದ) ಈ ಭೂತಗಳು ಹುಟ್ಟುತ್ತವೋ' (ತೈ. ಉ. ೩. ೧).

೭೩೧. ತತ್—ಚಾಚಿಕೊಂಡಿರುವವನು, ವ್ಯಾಪಿಸಿರುವವನು.

(ಎಲ್ಲಾ ಕಡೆಗಳಲ್ಲಿ) ಚಾಚಿಕೊಂಡಿರುವುದರಿಂದ ಬ್ರಹ್ಮಕ್ಕೆ ತತ್ ಎಂದು ಹೇಳುತ್ತಾರೆ.

'ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ' 'ಓಂ ತತ್ ಸತ್ ಎಂದು ಬ್ರಹ್ಮವು ಮೂರು ವಿಧವಾಗಿ ನಿರ್ದೇಶಿಸಲ್ಪಡುತ್ತದೆ' (ಗೀತಾ. ೧೭. ೨೩).

೭೩೨. ಪದಮನುತ್ತಮಮ್-ಮುಮುಕ್ಷುಗಳು ಹೊಂದುವ ಸರ್ವೋತ್ಕೃಷ್ಟವಾದ ಪದವಿಯಾಗಿರುವವನು.

೭೩೩. ಲೋಕಬಂಧುಃ—ಲೋಕಗಳಿಗೆಲ್ಲ ಬಂಧುವಾಗಿರುವವನು.

ಆಧಾರಭೂತನಾದ ಭಗವಂತನಲ್ಲಿ ಸಕಲಲೋಕಗಳೂ ಬಂಧಿಸಲ್ಪಟ್ಟವೆಯಾದುದರಿಂದ ಅವನು ಲೋಕಗಳಿಗೆಲ್ಲ ಬಂಧುವಾಗಿರುವನು. ಅಥವಾ ಭಗವಂತನು ಲೋಕಗಳಿಗೆಲ್ಲ ಜನಕನಾಗಿರುವನು. ಜನಕನಿಗೆ ಸಮಾನರಾದ ಬಂಧುಗಳಿಲ್ಲ. ಆದುದರಿಂದ ಭಗವಂತನು ಲೋಕಬಂಧುವು. ಅಥವಾ ಭಗವಂತನು ಲೋಕಗಳಿಗೆ ಬಂಧುವಿನಂತೆ ಶ್ರುತಿಸ್ಮೃತಿರೂಪವಾದ ಹಿತಾಹಿತೋಪದೇಶವನ್ನು ಮಾಡಿದವನಾದುದರಿಂದ ಲೋಕಬಂಧುವು.

೭೩೪. ಲೋಕನಾಥಃ—ಲೋಕದ ಜನರಿಂದ ಯಾಚಿಸಲ್ಪಡುವವನು.

ಅಥವಾ ಲೋಕಗಳನ್ನು ಉಪತಪಿಸುವವನು, ಆಳುವವನು, ರಕ್ಷಿಸುವವನು.

೭೩೫. ಮಾಧವಃ—ಮಧುಕುಲದಲ್ಲಿ ಹುಟ್ಟಿದವನು.

೭೩೬. ಭಕ್ತವತ್ಸಲಃ—ಭಕ್ತರಲ್ಲಿ ಸ್ನೇಹವುಳ್ಳವನು.

೭೩೭. ಸುವರ್ಣವರ್ಣಃ—ಬಂಗಾರದಂತೆ ವರ್ಣವುಳ್ಳವನು.

೭೩೮. ಹೇಮಾಂಗಃ—ಚಿನ್ನದಂತೆ ಶರೀರವುಳ್ಳವನು.

೭೩೯. ವರಾಂಗಃ—ಸುಂದರವಾದ ಅವಯವಗಳುಳ್ಳವನು.

೭೪೦. ಚಂದನಾಂಗದೀ—ಆಹ್ಲಾದವನ್ನುಂಟುಮಾಡುವ ಕೇಯೂರಗಳಿಂದ ಅಲಂಕೃತನಾಗಿರುವವನು.

೭೪೧. ವೀರಹಾ—ಧರ್ಮರಕ್ಷಣೆಗಾಗಿ ವೀರರಾದ ಅಸುರಪ್ರಮುಖರನ್ನು ಕೊಲ್ಲುವವನು.

೭೪೨. ವಿಷಮಃ—ತನಗೆ ಸಮಾನರಾದವರು ಯಾರೂ ಇಲ್ಲದವನು.

ಭಗವಂತನು ಸರ್ವವಿಲಕ್ಷಣನಾದುದರಿಂದ ಅವನಿಗೆ ಸಮಾನರಾದವರು ಯಾರೂ ಇಲ್ಲ. ಆದುದರಿಂದ ಅವನಿಗೆ ವಿಷಮ ಎಂದು ಹೆಸರು.

'ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ' 'ನಿನಗೆ ಸಮಾನರಾದವರು ಯಾರೂ ಇಲ್ಲ. ಹೀಗಿರುವಾಗ, ನಿನಗಿಂತ ಅಧಿಕನಾದವನು ಎಲ್ಲಿರುವನು?' (ಗೀತಾ ೧೧. ೪೩).

೭೪೩. ಶೂನ್ಯಃ—ಸರ್ವವಿಶೇಷಗಳಿಂದ ರಹಿತನಾಗಿರುವವನು.

೭೪೪. ಘೃತಾಶೀಃ—ನಾಶವಾಗಿರುವ ಆಶೆಗಳುಳ್ಳವನು.

೭೪೫. ಅಚಲಃ—ಅಚಲನು.

ಭಗವಂತನು ತನ್ನ ಸ್ವರೂಪದಿಂದ ಸಾಮರ್ಥ್ಯದಿಂದ ಮತ್ತು ಜ್ಞಾನಾದಿಕ ಗುಣಗಳಿಂದ ಚಲಿಸದೆ ಇರುವವನಾದುದರಿಂದ ಅಚಲನು.

೭೪೬. ಚಲಃ—ವಾಯುರೂಪದಿಂದ ಚಲಿಸುವವನು.

೭೪೭. ಅಮಾನೀ—ಅನಾತ್ಮವಸ್ತುಗಳಲ್ಲಿ ಆತ್ಮಾಭಿಮಾನವಿಲ್ಲದವನು.

ಶುದ್ಧ ಜ್ಞಾನರೂಪನಾದ ಪರಮಾತ್ಮನಿಗೆ ಅನಾತ್ಮವಸ್ತುಗಳಲ್ಲಿ ಆತ್ಮಾಭಿಮಾನವು ಇಲ್ಲವಾದುದರಿಂದ ಅವನು ಅಮಾನೀ.

೭೪೮. ಮಾನದಃ—ತನ್ನ ಮಾಯೆಯಿಂದ ಎಲ್ಲರಿಗೂ ಅನಾತ್ಮವಸ್ತು ಗಳಲ್ಲಿ ಆತ್ಮಾಭಿಮಾನವನ್ನು ಕೊಡುವವನು (ಉಂಟುಮಾಡುವವನು).

ಅಥವಾ ಭಕ್ತರಿಗೆ ಗೌರವವನ್ನು ಕೊಡುವವನು ಅಥವಾ ತತ್ತ್ವವಿದರಿಗೆ ಅನಾತ್ಮವಸ್ತುಗಳಲ್ಲಿರುವ ಆತ್ಮಾಭಿಮಾನವನ್ನು ನಾಶಮಾಡುವವನು.

೭೪೯. ಮಾನ್ಯಃ—ಎಲ್ಲರಿಂದಲೂ ಪೂಜಿಸಲ್ಪಡತಕ್ಕವನು.

ಭಗವಂತನು ಸರ್ವೇಶ್ವರನಾದುದರಿಂದ ಎಲ್ಲರಿಂದಲೂ ಪೂಜಿಸಲ್ಪಡತಕ್ಕವನು.

೭೫೦. ಲೋಕಸ್ವಾಮೀ—ಹದಿನಾಲ್ಕು ಲೋಕಗಳಿಗೂ ಒಡೆಯನಾಗಿರುವವನು.

೭೫೧. ತ್ರಿಲೋಕಧೃಕ್ — ಮೂರು ಲೋಕಗಳನ್ನೂ ಹೊತ್ತಿರುವವನು.

೭೫೨. ಸುಮೇಧಾಃ—ಉಜ್ಜ್ವಲವಾದ ಪ್ರಜ್ಞೆಯುಳ್ಳವನು.

೭೫೩. ಮೇಧಜಃ—ಯಜ್ಞದಲ್ಲಿ ಹುಟ್ಟುವವನು.

೭೫೪. ಧನ್ಯಃ—ಕೃತಾರ್ಥನಾಗಿರುವವನು.

೭೫೫. ಸತ್ಯಮೇಧಾಃ—ಎಂದಿಗೂ ವಿಫಲವಾಗದ ಮತ್ತು ಯಾವಾಗಲೂ ಸತ್ಯವಾಗಿರುವ ಮೇಧಸ್ಸುಳ್ಳವನು.

೭೫೬. ಧರಾಧರಃ—ಶೇಷನೇ ಮೊದಲಾದ ತನ್ನ ಎಲ್ಲಾ ಅಂಶಗಳಿಂದ ಇಡೀ ಪೃಥ್ವಿಯನ್ನು ಹೊತ್ತಿರುವವನು.

೭೫೭. ತೇಜೋವೃಷಃ—ಜಲವನ್ನು ವರ್ಷಿಸುವವನು.

ಭಗವಂತನು ಆದಿತ್ಯರೂಪದಿಂದ ಯಾವಾಗಲೂ ಜಲವನ್ನು ವರ್ಷಿಸುತ್ತಾನೆ. ಆದುದರಿಂದ ಅವನಿಗೆ ತೇಜೋವೃಷ ಎಂದು ಹೆಸರು.

೭೫೮. ದ್ಯುತಿಧರಃ—ದೇಹಕಾಂತಿಯನ್ನು ಧರಿಸಿರುವವನು.

**೨೫೯. ಸರ್ವಶಸ್ತ್ರಭೃತಾಂ ವರಃ**—ಸಮಸ್ತ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾಗಿರುವವನು.

**೨೬೦. ಪ್ರಗ್ರಹಃ**-ಭಕ್ತರಿಂದ ಸಮರ್ಪಿಸಲ್ಪಟ್ಟ ಪತ್ರಪುಷ್ಪಾದಿಗಳನ್ನು ಗ್ರಹಣಮಾಡುವವನು.

ಅಥವಾ ವಿಷಯಗಳೆಂಬ ಅರಣ್ಯದಲ್ಲಿ ಓಡುತ್ತಿರುವ, ಪಳಗಿಸಲು ಕಷ್ಟಸಾಧ್ಯವಾದ, ಇಂದ್ರಿಯಗಳೆಂಬ ಕುದುರೆಗಳನ್ನು ಭಗವಂತನು ತನ್ನ ಅನುಗ್ರಹದಿಂದ ಲಗಾಮಿನಿಂದೋಬಂತೆ ಬಂಧಿಸುತ್ತಾನೆ. ಆದುದರಿಂದ ಅವನಿಗೆ ಪ್ರಗ್ರಹ ಎಂದು ಹೆಸರು.

**೨೬೧. ನಿಗ್ರಹಃ**—ಎಲ್ಲವನ್ನೂ ಸ್ವಾಧೀನಪಡಿಸಿ ನಿಗ್ರಹಿಸುವವನು.

**೨೬೨. ವ್ಯಗ್ರಃ**—ವಿನಾಶವಿಲ್ಲದವನು.

ಅಥವಾ ಭಕ್ತರ ಅಭೀಷ್ಟಗಳನ್ನು ಕೊಡುವುದರಲ್ಲಿ ಮಗ್ನನಾಗಿರುವವನು.

**೨೬೩. ನೈಕಶೃಂಗಃ**—ಅನೇಕ ಕೊಂಬುಗಳುಳ್ಳವನು.

'ಚತ್ವಾರಿ ಶೃಂಗಾ ತ್ರಯೋಽಸ್ಯ ಪಾದಾ....ಮಹಾದೇವೋ ಮರ್ತ್ಯಾನ್ ಅವಿವೇಶ' 'ಇವನಿಗೆ ನಾಲ್ಕು ಕೊಂಬುಗಳು, ಮೂರು ಕಾಲುಗಳು, ಎರಡು ಶಿರಸ್ಸುಗಳು, ಏಳು ಕೈಗಳು; ಮೂರು ಕಡೆಗಳಲ್ಲಿ ಬಂಧಿತನಾದ ವೃಷಭರೂಪನಾದ ಮಹಾದೇವನು ಶಬ್ದಮಾಡುತ್ತಾನೆ ಮತ್ತು ಮನುಷ್ಯರಲ್ಲಿ ಪ್ರವೇಶಿಸುತ್ತಾನೆ' (ತೈ. ಆ. ೧. ೧೦. ೧೭).

**೨೬೪. ಗದಾಗ್ರಜಃ**—ಎಲ್ಲರಿಗಿಂತ ಮೊದಲು ಮಂತ್ರದಿಂದ ಹುಟ್ಟಿದವನು.

ಅಥವಾ ಗದ ಎಂದು ಶ್ರೀಕೃಷ್ಣನ ತಮ್ಮನ ಹೆಸರು. ಗದನಿಗಿಂತ ಮೊದಲು ಹುಟ್ಟಿದವನಾದ್ದರಿಂದ ಭಗವಂತನಿಗೆ ಗದಾಗ್ರಜ ಎಂದು ಹೆಸರು.

**೨೬೫. ಚತುರ್ಮೂರ್ತಿಃ**—ನಾಲ್ಕು ಮೂರ್ತಿಗಳುಳ್ಳವನು.

ಭಗವಂತನಿಗೆ ವಿರಾಟ್ ಸೂತ್ರಾತ್ಮ ಅವ್ಯಾಕೃತ ಮತ್ತು ತುರೀಯ ಎಂಬ ನಾಲ್ಕು ಮೂರ್ತಿಗಳಿವೆ. ಆದುದರಿಂದ ಅವನು ಚತುರ್ಮೂರ್ತಿ. ಅಥವಾ ಭಗವಂತನಿಗೆ ಬಿಳಿ ಕೆಂಪು ಹಳದಿ ಮತ್ತು ಕೃಷ್ಣ—ಈ ನಾಲ್ಕು ವರ್ಣಗಳ ನಾಲ್ಕು ಮೂರ್ತಿಗಳಿವೆಯಾದುದರಿಂದ ಅವನು ಚತುರ್ಮೂರ್ತಿ.

**೨೬೬. ಚತುರ್ಬಾಹುಃ**—ನಾಲ್ಕು ಬಾಹುಗಳುಳ್ಳವನು.

**೨೬೭. ಚತುರ್ವ್ಯೂಹಃ**—ನಾಲ್ಕು ವ್ಯೂಹಗಳುಳ್ಳವನು.

ಭಗವಂತನಿಗೆ (ಬಹ್ವೃಚ ಉಪನಿಷತ್ತಿನಲ್ಲಿ ಹೇಳಿರುವ) ಶರೀರಪುರುಷ ಛಂದಃಪುರುಷ ವೇದಪುರುಷ ಮತ್ತು ಮಹಾಪುರುಷ ಎಂಬ ನಾಲ್ಕು ವ್ಯೂಹಗಳಿವೆ. ಆದುದರಿಂದ ಅವನು ಚತುರ್ವ್ಯೂಹನು.

**೨೬೮. ಚತುರ್ಗತಿಃ**—ಶಾಸ್ತ್ರದಲ್ಲಿ ಹೇಳಿರುವ ಹಾಗೆ ನಡೆಯುವ ನಾಲ್ಕು ಆಶ್ರಮದವರಿಗೂ ನಾಲ್ಕು ವರ್ಣದವರಿಗೂ ಗತಿಯಾಗಿರುವವನು.

**೨೬೯. ಚತುರಾತ್ಮಾ**—ಚತುರವಾದ ಮನಸ್ಸುಳ್ಳವನು.

ಭಗವಂತನ ಮನಸ್ಸು ರಾಗದ್ವೇಷಾದಿಗಳಿಂದ ರಹಿತವಾಗಿರುವುದರಿಂದ ಚತುರ ವಾಗಿರುವುದು. ಆದುದರಿಂದ ಭಗವಂತನಿಗೆ ಚತುರಾತ್ಮಾ ಎಂದು ಹೆಸರು. ಅಥವಾ ಭಗವಂತನು ಮನಸ್ಸು ಬುದ್ಧಿ ಅಹಂಕಾರ ಮತ್ತು ಚಿತ್ತ ಎಂಬ ನಾಲ್ಕು ಅಂತಃ ಕರಣಗಳುಳ್ಳವನಾದುದರಿಂದ ಅವನಿಗೆ ಚತುರಾತ್ಮಾ ಎಂದು ಹೆಸರು.

**೨೭೦. ಚತುರ್ಭಾವಃ** — ಧರ್ಮ ಅರ್ಥ ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಉತ್ಪತ್ತಿಮಾಡಿದವನು.

**೨೭೧. ಚತುರ್ವೇದವಿತ್**—ನಾಲ್ಕು ವೇದಗಳ ಅರ್ಥವನ್ನು ಯಥಾ ವತ್ತಾಗಿ ತಿಳಿದಿರುವವನು.

**೨೭೨. ಏಕಪಾತ್**—ಒಂದೇ ಪಾದವುಳ್ಳವನು.

'ಪಾದೋಽಸ್ಯ ವಿಶ್ವಾ ಭೂತಾನಿ' 'ಸರ್ವಭೂತಗಳು ಭಗವಂತನ ಒಂದು ಪಾದವಾಗಿವೆ' (ಪು. ಸೂ. ೩). 'ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್' ನಾನು ಇಡೀ 'ಜಗತ್ತನ್ನು ಒಂದೇ ಅಂಶದಿಂದ ಧರಿಸಿಕೊಂಡಿದ್ದೇನೆ'(ಗೀತಾ. ೧೦. ೪೨).

**೨೭೩. ಸಮಾವರ್ತಃ**-ಸಂಸಾರಚಕ್ರವನ್ನು ಯೋಗ್ಯವಾದ ರೀತಿಯಲ್ಲಿ ತಿರುಗಿಸುವವನು.

**೨೭೪. ಅನಿವೃತ್ತಾತ್ಮಾ**—ಭಗವಂತನು ಸರ್ವತ್ರವೂ ಇರುವವನಾದುದ ರಿಂದ ಎಲ್ಲಿಂದಲೂ ನಿವೃತ್ತವಾಗದ ಆತ್ಮವುಳ್ಳವನು. ಅಥವಾ,

ನಿವೃತ್ತಾತ್ಮಾ—ವಿಷಯಗಳಿಂದ ನಿವೃತ್ತವಾದ ಮನಸ್ಸುಳ್ಳವನು.

**೨೭೫. ದುರ್ಜಯಃ**—ಜಯಿಸಲು ಅಸಾಧ್ಯನಾಗಿರುವವನು.

**೨೭೬. ದುರತಿಕ್ರಮಃ**—ಅತಿಕ್ರಮಿಸಲ್ಪಡದೆ ಇರುವವನು.

ಭಯದ ಕಾರಣದಿಂದ ಸೂರ್ಯಾದಿಗಳು ಭಗವಂತನ ಆಜ್ಞೆಯನ್ನು ಉಲ್ಲಂ ಘಿಸುವುದಿಲ್ಲ. ಆದುದರಿಂದ ಭಗವಂತನಿಗೆ ದುರತಿಕ್ರಮ ಎಂದು ಹೆಸರು.

'ಭಯಾದಸ್ಯಾಗ್ನಿಸ್ತಪತಿ....ಮೃತ್ಯುರ್ಧಾವತಿ ಪಂಚಮಃ' 'ಇದರ (ಬ್ರಹ್ಮದ) ಭಯದಿಂದ ಅಗ್ನಿಯು ಸುಡುತ್ತಾನೆ. (ಇದರ) ಭಯದಿಂದ ಸೂರ್ಯನು ಪ್ರಕಾ ಶಿಸುತ್ತಾನೆ, (ಇದರ) ಭಯದಿಂದ ಇಂದ್ರನೂ ವಾಯುವೂ ಮತ್ತು ಪಂಚಮನಾದ ಮೃತ್ಯುವೂ ಓಡುತ್ತಾರೆ' (ಕ. ಉ. ೨. ೩. ೩).

**೨೭೭. ದುರ್ಲಭಃ**—ದುರ್ಲಭವಾದ ಭಕ್ತಿಯಿಂದ ಲಭ್ಯನಾಗುವವನು.

'ಜನ್ಮಾಂತರಸಹಸ್ರೇಷು........ಕೃಷ್ಣೇ ಭಕ್ತಿಃ ಪ್ರಜಾಯತೇ' 'ಸಹಸ್ರಾರು ಜನ್ಮಗಳಲ್ಲಿ ಮಾಡಿದ ತಪಸ್ಸು ಜ್ಞಾನ ಮತ್ತು ಸಮಾಧಿಗಳಿಂದ ತಮ್ಮ ಪಾಪಗಳನ್ನೆಲ್ಲ ನಾಶಮಾಡಿಕೊಂಡ ಮನುಷ್ಯರಿಗೆ ಕೃಷ್ಣನಲ್ಲಿ ಭಕ್ತಿಯು ಹುಟ್ಟುತ್ತದೆ' (ವ್ಯಾಸ). 'ಭಕ್ತ್ಯಾ ಲಭ್ಯಸ್ತ್ವನನ್ಯಯಾ' 'ಅನನ್ಯವಾದ ಭಕ್ತಿಯಿಂದ ನಾನು ಲಭ್ಯನು'(ಗೀತಾ. ಅ. ೨೨).

೭೭೮. **ದುರ್ಗಮಃ**—ಬಹಳ ಕಷ್ಟದಿಂದ ಅರಿಯಲ್ಪಡುವವನು.

೭೭೯. **ದುರ್ಗಃ**—ನಾನಾ ವಿಘ್ನಗಳಿಂದ ಪ್ರತಿಹತರಾದವರಿಂದ ಬಹಳ ಕಷ್ಟದಿಂದ ಹೊಂದಲ್ಪಡುವವನು.

೭೮೦. **ದುರಾವಾಸಃ**—ಬಹಳ ಕಷ್ಟದಿಂದ ಸ್ಥಾಪಿಸಲ್ಪಡುವವನು.

ಭಗವಂತನು ಯೋಗಿಗಳಿಂದ ಸಮಾಧಿಸ್ಥಿತಿಯಲ್ಲಿ ಬಹಳ ಕಷ್ಟದಿಂದ ತಮ್ಮ ಚಿತ್ತದಲ್ಲಿ ಸ್ಥಾಪಿಸಲ್ಪಡುತ್ತಾನೆ. ಆದುದರಿಂದ ಅವನಿಗೆ ದುರಾವಾಸ ಎಂದು ಹೆಸರು.

೭೮೧. **ದುರಾರಿಹಾ**—ದುಷ್ಟಶತ್ರುಗಳಾದ ದಾನವಾದಿಗಳನ್ನು ಕೊಲ್ಲುವವನು.

೭೮೨. **ಶುಭಾಂಗಃ**—ಸುಂದರವಾದ ಅಂಗಗಳುಳ್ಳವನು.

ಭಗವಂತನು ಸುಂದರವಾದ ಅಂಗಗಳುಳ್ಳವನಾಗಿ ಧ್ಯಾನಿಸಲ್ಪಡತಕ್ಕವನು.

೭೮೩. **ಲೋಕಸಾರಂಗಃ**—ಲೋಕಗಳ ಸಾರವನ್ನು ಭ್ರಮರದಂತೆ ಗ್ರಹಣಮಾಡುವವನು.

ಅಥವಾ ಪ್ರಣವವು ಲೋಕಸಾರವು. ಭಗವಂತನು ಪ್ರಣವದಿಂದ ತಿಳಿಯಲ್ಪಡತಕ್ಕವನು. ಆದುದರಿಂದ ಅವನಿಗೆ ಲೋಕಸಾರಂಗ ಎಂದು ಹೆಸರು.

೭೮೪. **ಸುತಂತುಃ**—ಸುಂದರವಾದ ತಂತುವುಳ್ಳವನು.

ಭಗವಂತನ ತಂತುವು ಎಂದರೆ ಈ ವಿಸ್ತಾರವಾದ ಜಗತ್ತು ಸುಂದರವಾಗಿದೆ. ಆದುದರಿಂದ ಭಗವಂತನಿಗೆ ಸುತಂತು ಎಂದು ಹೆಸರು.

೭೮೫. **ತಂತುವರ್ಧನಃ**-ತಂತುವನ್ನು ಅಂದರೆ ಜಗತ್ತನ್ನು ಅಭಿವೃದ್ಧಿಗೊಳಿಸುವವನು.

ಅಥವಾ ಜಗತ್ತನ್ನು ನಾಶಮಾಡುವವನು.

೭೮೬. **ಇಂದ್ರಕರ್ಮಾ**—ಇಂದ್ರನ ಕರ್ಮಕ್ಕೆ ಸಮಾನವಾದ ಕರ್ಮವುಳ್ಳವನು.

ಎಂದರೆ ಐಶ್ವರ್ಯಕರ್ಮವುಳ್ಳವನು.

೭೮೭. **ಮಹಾಕರ್ಮಾ**—ಮಹತ್ತಾದ ಕರ್ಮಗಳುಳ್ಳವನು.

ಭಗವಂತನ ಕರ್ಮಗಳು ಎಂದರೆ ಕಾರ್ಯಗಳಾದ ಆಕಾಶವೇ ಮೊದಲಾದ ಭೂತಗಳು ಮಹತ್ತಾದುವುಗಳು. ಆದುದರಿಂದ ಭಗವಂತನು ಮಹಾಕರ್ಮಾ.

**೭೭೮. ಕೃತಕರ್ಮಾ**—ಕೃತಾರ್ಥನು.

ಭಗವಂತನು ಕೃತಾರ್ಥನಾದುದರಿಂದ ಅವನಿಂದ ಎಲ್ಲವೂ ಮಾಡಲ್ಪಟ್ಟಿದೆ. ಅವನು ಇನ್ನೂ ಮಾಡಬೇಕಾದ ಕರ್ಮವು ಯಾವುದೂ ಇಲ್ಲ. ಆದುದರಿಂದ ಭಗವಂತನು ಕೃತಕರ್ಮನು; ಅಥವಾ ಧರ್ಮಾತ್ಮಕವಾದ ಕರ್ಮವನ್ನು ಮಾಡಿದವನಾದುದರಿಂದ ಭಗವಂತನು ಕೃತಕರ್ಮನು.

**೭೭೯. ಕೃತಾಗಮಃ**—ವೇದರೂಪವಾದ ಆಗಮವನ್ನು ರಚಿಸಿದವನು.

'ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ ಯದೃಗ್ವೇದಃ' 'ಈ ಯಾವ ಋಗ್ವೇದವೋ ಅದು ಈ ಮಹಾಭೂತನ (ಭಗವಂತನ) ನಿಃಶ್ವಾಸವು (ಬೃ.ಉ. ೨. ೪. ೧೦).

**೭೮೦. ಉದ್ಭವಃ** — ಸ್ವೇಚ್ಛೆಯಿಂದ ಉತ್ಕೃಷ್ಟವಾದ ಜನ್ಮವನ್ನು ಹೊಂದುವವನು.

ಅಥವಾ ಭಗವಂತನು ಸರ್ವಕಾರಣನಾದುದರಿಂದ ಅವನಿಗೆ ಜನ್ಮವಿಲ್ಲ. ಆದುದರಿಂದ ಅವನಿಗೆ ಉದ್ಭವ ಎಂದು ಹೆಸರು.

**೭೮೧. ಸುಂದರಃ**—ವಿಶ್ವಕ್ಕಿಂತಲೂ ಅತಿಶಯವಾದ ಸೌಭಾಗ್ಯದಿಂದ ಕೂಡಿರುವವನು.

**೭೮೨. ಸುಂದಃ**—ವಿಶೇಷ ಕರುಣೆಯನ್ನು ತೋರಿಸುವವನು.

**೭೮೩. ರತ್ನನಾಭಃ**—ರತ್ನದಂತೆ ಮನೋಹರವಾದ ನಾಭಿಯುಳ್ಳವನು.

**೭೮೪. ಸುಲೋಚನಃ**—ಸುಂದರವಾದ ಕಣ್ಣುಗಳುಳ್ಳವನು ಅಥವಾ ಉತ್ಕೃಷ್ಟವಾದ ಜ್ಞಾನವುಳ್ಳವನು.

**೭೮೫. ಅರ್ಕಃ**—ಪೂಜ್ಯತಮರಾದ ಬ್ರಹ್ಮಾದಿಗಳಿಂದಲೂ ಅರ್ಚಿಸಲ್ಪಡತಕ್ಕವನು.

**೭೮೬. ವಾಜಸನಃ**—ಯಾಚಕರಿಗೆ ಅನ್ನವನ್ನು ಕೊಡುವವನು.

**೭೮೭. ಶೃಂಗೀ**—ಪ್ರಲಯಸಾಗರದಲ್ಲಿ ಕೊಂಬುಳ್ಳ ಮತ್ಸ್ಯವಿಶೇಷ ರೂಪವನ್ನು ಧರಿಸಿದವನು.

**೭೮೮. ಜಯಂತಃ**—ಶತ್ರುವನ್ನು ಅತಿಶಯವಾಗಿ ಜಯಿಸುವವನು.

ಅಥವಾ ಜಯಕ್ಕೆ ಕಾರಣನಾಗಿರುವವನು.

**೭೮೯. ಸರ್ವವಿಜ್ಜಯೀ**—ಸರ್ವವಿದನೂ ಜಯಿಯೂ ಆಗಿರುವವನು.

ಭಗವಂತನು ಸರ್ವವಿಷಯಗಳ ಜ್ಞಾನವುಳ್ಳವನಾದುದರಿಂದ ಸರ್ವವಿತ್ ಮತ್ತು ಆಂತರಿಕಶತ್ರುಗಳಾದ ರಾಗಾದಿಗಳನ್ನೂ ಬಾಹ್ಯಶತ್ರುಗಳಾದ ದುರ್ಜಯರಾದ ಹಿರಣ್ಯಾಕ್ಷಾದಿಗಳನ್ನೂ ಜಯಿಸುವಂತಹ ಶೀಲವುಳ್ಳವನಾದುದರಿಂದ ಜಯಿ.

**೮೦೦. ಸುವರ್ಣಬಿಂದುಃ**-ಚಿನ್ನಸದೃಶವಾದ ಅವಯವಗಳುಳ್ಳವನು.

ಅಥವಾ ಯಾವ ಮಂತ್ರದಲ್ಲಿ ಸುಂದರವಾದ ಅಕ್ಷರವೂ ಬಿಂದುವೂ ಇರುವುವೋ, ಭಗವಂತನು ಆ ಓಂಕಾರಮಂತ್ರರೂಪನಾಗಿರುವನು. ಆದುದರಿಂದ ಅವನಿಗೆ ಸುವರ್ಣಬಿಂದು ಎಂದು ಹೆಸರು.

'ಆಪ್ರಣಖಾತ್ ಸರ್ವ ಏವ ಸುವರ್ಣಃ' '(ಶಿರಸ್ಸಿನಿಂದ) ಉಗುರಿನವರೆಗೆ ಎಲ್ಲವೂ ಸುವರ್ಣವೇ' (ಛಾ. ಉ. ೧. ೬. ೬).

**೮೦೧. ಅಕ್ಷೋಭ್ಯಃ**—ಕ್ಷೋಭೆಯನ್ನು ಹೊಂದದೆ ಇರುವವನು.

ಭಗವಂತನು ರಾಗದ್ವೇಷಗಳಿಂದಾಗಲಿ ಶಬ್ದಾದಿವಿಷಯಗಳಿಂದಾಗಲಿ ಅಥವಾ ದೇವಶತ್ರುಗಳಿಂದಾಗಲಿ ಕ್ಷೋಭೆಯನ್ನು ಹೊಂದುವುದಿಲ್ಲ. ಆದುದರಿಂದ ಅವನು ಅಕ್ಷೋಭ್ಯನು.

**೮೦೨. ಸರ್ವವಾಗೀಶ್ವರೇಶ್ವರಃ**—ಬ್ರಹ್ಮಾದಿ ಸಮಸ್ತವಾಗೀಶ್ವರರಿಗೂ ಈಶ್ವರನಾಗಿರುವವನು.

**೮೦೩. ಮಹಾಹ್ರದಃ**—ದೊಡ್ಡ ಸರೋವರದಂತಿರುವವನು.

ಯೋಗಿಗಳು ಬ್ರಹ್ಮಾನಂದದಲ್ಲಿ ಮುಳುಗಿ ವಿಶ್ರಮಿಸಿ ಸುಖದಿಂದ ಇರುತ್ತಾರೆ. ಆದುದರಿಂದ ಪರಮಾತ್ಮನು ದೊಡ್ಡ ಸರೋವರ(ಮಹಾಹ್ರದ)ದಂತಿರುವನು.

**೮೦೪. ಮಹಾಗರ್ತಃ**—ದೊಡ್ಡದಾದ ಹಳ್ಳದಂತೆ ದಾಟಲು ಕಷ್ಟಸಾಧ್ಯವಾದ ಮಾಯೆಯುಳ್ಳವನು.

'ಮಮ ಮಾಯಾ ದುರತ್ಯಯಾ' 'ನನ್ನ ಮಾಯೆಯನ್ನು ದಾಟುವುದು ಕಷ್ಟಸಾಧ್ಯವು' (ಗೀತಾ ೭. ೧೪).

ಅಥವಾ ಗರ್ತ ಎಂದು ರಥಕ್ಕೆ ಹೇಳುತ್ತಾರೆ. ಭಗವಂತನು ಮಹಾರಥವುಳ್ಳವನೆಂದು ಮಹಾಭಾರತ ಮೊದಲಾದುವುಗಳಲ್ಲಿ ಪ್ರಸಿದ್ಧನಾಗಿದ್ದಾನೆ. ಆದುದರಿಂದ ಅವನಿಗೆ ಮಹಾಗರ್ತ ಎಂದು ಹೆಸರು.

**೮೦೫. ಮಹಾಭೂತಃ** — ಕಾಲತ್ರಯದಿಂದಲೂ ಅನವಚ್ಛಿನ್ನವಾಗಿರುವ ಸ್ವರೂಪವುಳ್ಳವನು.

**೮೦೬. ಮಹಾನಿಧಿಃ**—ಮಹಾಂತನೂ ಸರ್ವಭೂತಗಳಿಗೆ ಆಶ್ರಯಸ್ಥಾನನೂ ಆಗಿರುವವನು.

**೮೦೭. ಕುಮುದಃ**—ಪೃಥ್ವಿಯ ಭಾರವನ್ನು ಇಳಿಸಿ ಪೃಥ್ವಿಯನ್ನು ಸಂತೋಷಪಡಿಸುವವನು.

**೮೦೮. ಕುಂದರಃ**—ಕುಂದಪುಷ್ಪಗಳಂತೆ ಶುದ್ಧವಾದ ಫಲಗಳನ್ನು ಕೊಡುವವನು ಅಥವಾ ಗ್ರಹಣಮಾಡುವವನು.

ಅಥವಾ ಹಿರಣ್ಯಾಕ್ಷನನ್ನು ಕೊಲ್ಲುವ ಇಚ್ಛೆಯಿಂದ ವರಾಹರೂಪವನ್ನು ಧರಿಸಿ ಧರಣಿಯನ್ನು ಸೀಳಿದವನು.

**೭೦೯. ಕುಂದಃ**–ಕುಂದಪುಷ್ಪದಂತೆ ಸುಂದರವಾದ ಅವಯವಗಳುಳ್ಳವ ನಾದುದರಿಂದ ಸ್ವಚ್ಛವಾಗಿರುವವನು, ಸ್ಫಟಿಕಮಣಿಯಂತೆ ನಿರ್ಮಲವಾಗಿರು ವವನು.

ಅಥವಾ ಕಶ್ಯಪನಿಗೆ ಪೃಥ್ವಿಯನ್ನು ದಾನವಾಗಿ ಕೊಟ್ಟವನಾದುದರಿಂದ ಭಗವಂತನಿಗೆ ಕುಂದ ಎಂದು ಹೆಸರು.

'ಸರ್ವಪಾಪವಿಶುದ್ಧ್ಯರ್ಥಂ....ಮಾರೀಚಾಯ ದದೌ ಪ್ರೀತಃ ಕಶ್ಯಪಾಯ ವಸುಂಧರಾಮ್' 'ಭಗವಂತನು ಪರಶುರಾಮನಾಗಿ ಅವತರಿಸಿದ್ದಾಗ, ತನ್ನ ಸರ್ವ ಪಾಪಗಳ ನಿವೃತ್ತಿಗೋಸ್ಕರ ಅಶ್ವಮೇಧಯಜ್ಞವನ್ನು ಮಾಡಿದನು ಮತ್ತು ಮಹಾ ದಾನಗಳನ್ನು ಮಾಡಬೇಕಾದ ಆ ಯಜ್ಞದಲ್ಲಿ ಕಶ್ಯಪನಿಗೆ ದಕ್ಷಿಣೆಯಾಗಿ ಪೃಥ್ವಿಯನ್ನು ಪ್ರೀತಿಪೂರ್ವಕವಾಗಿ ಕೊಟ್ಟನು' (ಹರಿ. ೧. ೪೧. ೧೬–೧೭).

ಅಥವಾ (ಪರಶುರಾಮನಾಗಿ) ಪೃಥ್ವೀಶ್ವರರನ್ನು ಅಂದರೆ ಕ್ಷತ್ರಿಯರಾಜರನ್ನು ನಾಶಮಾಡಿದವನು.

**೭೧೦. ಪರ್ಜನ್ಯಃ**—ಮಳೆಯಂತೆ ಆಧ್ಯಾತ್ಮಿಕವೇ ಮೊದಲಾದ ತಾಪ ತ್ರಯವನ್ನು ಶಾಂತಗೊಳಿಸುವವನು.

ಅಥವಾ ಸರ್ವಾಭೀಷ್ಟಗಳನ್ನು ವರ್ಷಿಸುವವನು.

**೭೧೧. ಪಾವನಃ**—ಸ್ಮರಣಮಾತ್ರದಿಂದ ಪವಿತ್ರಗೊಳಿಸುವವನು.

**೭೧೨. ಅನಿಲಃ**—ಯಾವ ವಿಧವಾದ ಪ್ರೇರಣೆಯನ್ನೂ ಮಾಡದಿರು ವವನು.

ಅಥವಾ ಇಲ ಎಂಬ ಧಾತುವಿಗೆ ಮಲಗುವುದು ಎಂದು ಅರ್ಥ. ಆದುದರಿಂದ ಇಲ ಎಂದು ಅಜ್ಞಾನಿಗಳಿಗೆ ಹೇಳುತ್ತಾರೆ. ಭಗವಂತನು ನಿತ್ಯಪ್ರಬುದ್ಧಸ್ವರೂಪ ನಾದ್ದರಿಂದ ಇಲನಲ್ಲ (ಅಜ್ಞಾನಿಯಲ್ಲ), ಅನಿಲನು. ಅಥವಾ ಅನಿಲ ಎಂದರೆ ಭಕ್ತರಿಗೆ ಸುಲಭನಾಗಿರುವವನು.

**೭೧೩. ಅಮೃತಾಶಃ**—ಸ್ವಾತ್ಮಾಮೃತವನ್ನು ಕುಡಿಯುವವನು.

ಅಥವಾ ಸಮುದ್ರಮಂಥನಸಮಯದಲ್ಲಿ ಸಮುದ್ರದಿಂದ ಹೊರಗೆ ಬಂದ ಅಮೃತವನ್ನು ದೇವತೆಗಳಿಗೆಲ್ಲ ಕುಡಿಸಿ ತಾನೂ ಕುಡಿದವನು. ಅಥವಾ ಭಗವಂತನ ಆಶೆಗಳು ಶಾಶ್ವತವಾದ ಫಲವುಳ್ಳವುಗಳು. ಆದುದರಿಂದ ಅವನಿಗೆ ಅಮೃತಾಶಾಶ ಎಂದು ಹೆಸರು.

**೭೧೪. ಅಮೃತವಪುಃ**—ಮರಣವಿಲ್ಲದ ಶರೀರವುಳ್ಳವನು.

**೭೧೫. ಸರ್ವಜ್ಞಃ**—ಎಲ್ಲವನ್ನೂ ತಿಳಿದವನು.

**೭೧೬. ಸರ್ವತೋಮುಖಃ**–ಎಲ್ಲಾ ಕಡೆಗಳಲ್ಲೂ ಮುಖಗಳುಳ್ಳವನು.

'ಸರ್ವತೋಽಕ್ಷಿಶಿರೋಮುಖಮ್' '(ಭಗವಂತನು) ಎಲ್ಲಾ ಕಡೆಗಳಲ್ಲೂ ಕಣ್ಣುಗಳು ಶಿರಸ್ಸುಗಳು ಮತ್ತು ಮುಖಗಳು ಉಳ್ಳವನು' (ಗೀತಾ. ೧೩. ೧೩).

೪೧೭. ಸುಲಭಃ—ಭಕ್ತಿಮಾತ್ರದಿಂದ ಸಮರ್ಪಿಸಲ್ಪಟ್ಟ ಪತ್ರ ಪುಷ್ಪ ಫಲ-ಇವೇ ಮೊದಲಾದುವುಗಳಿಂದ ಸುಲಭವಾಗಿ ಲಭ್ಯನಾಗುವವನು.

೪೧೮. ಸುವ್ರತಃ—ಚೆನ್ನಾಗಿ ಊಟಮಾಡುವವನು ಅಥವಾ ಭೋಜನ ವನ್ನು ಮಾಡದೇ ಇರುವವನು.

೪೧೯. ಸಿದ್ಧಃ—ಅನನ್ಯಾಧೀನಸಿದ್ಧಿಯುಳ್ಳವನು.

೪೨೦. ಶತ್ರುಜಿತ್—ಶತ್ರುಗಳನ್ನು ಜಯಿಸುವವನು.

ದೇವತೆಗಳ ಶತ್ರುಗಳೇ ಭಗವಂತನ ಶತ್ರುಗಳು. ಅವರನ್ನು ಜಯಿಸುವವ ನಾದುದರಿಂದ ಭಗವಂತನು ಶತ್ರುಜಿತ್.

೪೨೧. ಶತ್ರುತಾಪನಃ—ಸುರಶತ್ರುಗಳನ್ನು ಸುಡುವವನು.

೪೨೨. ನ್ಯಗ್ರೋಧಃ—ಎಲ್ಲರಿಗಿಂತ ಮೇಲಿರುವವನು. ಅಥವಾ ಸರ್ವ ಭೂತಗಳನ್ನು ಅತಿಶಯಿಸಿ ತನ್ನ ಮಾಯೆಯನ್ನು ನಿರೋಧಿಸುವವನು.

೪೨೩. ಉದುಂಬರಃ—ಆಕಾಶಕ್ಕಿಂತ ಮೇಲಿನವನು, ಆಕಾಶವನ್ನು ಅತಿಶಯಿಸಿರುವವನು.

ಭಗವಂತನು ಆಕಾಶದ ಉತ್ಪತ್ತಿಗೆ ಕಾರಣನಾದುದರಿಂದ ಆಕಾಶಕ್ಕಿಂತ ಮೇಲಿನವನು. ಅಥವಾ ಅನ್ನ ಮೊದಲಾದುವುಗಳ ರೂಪದಿಂದ ವಿಶ್ವವನ್ನು ಪೋಷಿಸು ವವನು.

೪೨೪. ಅಶ್ವತ್ಥಃ—ಸಂಸಾರವನ್ನು ಹುಟ್ಟಿಸಿದವನು.

ನಾಳೆಯವರೆಗೆ ನಿಲ್ಲದೆ ಇರುವುದು ಅಶ್ವತ್ಥ. ಸಂಸಾರವು ನಾಳೆಯ ವರೆಗೆ ಕೂಡ ನಿಲ್ಲುವುದಿಲ್ಲವಾದುದರಿಂದ ಅದಕ್ಕೆ ಅಶ್ವತ್ಥವೆಂದು ಹೇಳುತ್ತಾರೆ. ಈ ಸಂಸಾರವು ಭಗವಂತನಿಂದ ಹುಟ್ಟಿದೆಯಾದುದರಿಂದ ಭಗವಂತನಿಗೂ ಅಶ್ವತ್ಥ ಎಂದು ಹೆಸರು.

'ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ' 'ಮೇಲೆ ಬುಡವುಳ್ಳ ಕೆಳಗೆ ಶಾಖೆಗಳುಳ್ಳ ಈ ಅಶ್ವತ್ಥವು ಸನಾತನವಾದುದು' (ಕ. ಉ. ೨. ೩. ೧). 'ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್' 'ಮೇಲೆ ಬುಡವುಳ್ಳ ಕೆಳಗೆ ಶಾಖೆಗಳುಳ್ಳ ಅಶ್ವತ್ಥವು ಅವ್ಯಯವಾದುದೆಂದು ಹೇಳು ತ್ತಾರೆ' (ಗೀತಾ. ೧೫. ೧).

೪೨೫. ಚಾಣೂರಾಂಧ್ರನಿಷೂದನಃ— ಚಾಣೂರ ಎಂಬ ಹೆಸರಿನ ಆಂಧ್ರನನ್ನು ಕೊಂದವನು.

೪೨೬. ಸಹಸ್ರಾರ್ಚಿಃ—ಅನಂತಕಿರಣಗಳುಳ್ಳವನು.

'ದಿವಿ ಸೂರ್ಯಸಹಸ್ರಸ್ಯ....ಭಾಸಸ್ತಸ್ಯ ಮಹಾತ್ಮನಃ' 'ಸಹಸ್ರ ಸೂರ್ಯರ ಪ್ರಕಾಶವು ಒಂದೇ ಸಲ ಆಕಾಶದಲ್ಲಿ ಉಂಟಾದರೆ, ಅದು ಆ ಮಹಾತ್ಮನ (ಭಗವಂತನ) ಪ್ರಕಾಶಕ್ಕೆ ಸಮಾನವಾದೀತು' (ಗೀತಾ. ೧೧. ೧೨).

**೮೨೭. ಸಪ್ತಜಿಹ್ವಃ**—ಏಳು ನಾಲಗೆಗಳುಳ್ಳವನು.

(ಅಗ್ನಿರೂಪನಾದ) ಭಗವಂತನಿಗೆ ಏಳು ನಾಲಗೆಗಳಿವೆಯಾದುದರಿಂದ ಅವನಿಗೆ ಸಪ್ತಜಿಹ್ವ ಎಂದು ಹೆಸರು.

'ಕಾಲೀ ಕರಾಲೀ ಚ ಮನೋಜವಾ ಚ....ಲೇಲಾಯಮಾನಾ ಇತಿ ಸಪ್ತಜಿಹ್ವಾ' 'ಅಗ್ನಿಗೆ ಕಾಲೀ ಕರಾಲೀ ಮನೋಜವಾ ಸುಲೋಹಿತಾ ಸುಧೂಮ್ರವರ್ಣಾ ಸ್ಫುಲಿಂಗಿನೀ ಮತ್ತು ದೇವೀವಿಶ್ವರುಚೀ ಎಂಬ ಏಳು ಅಲುಗಾಡುವ ನಾಲಗೆಗಳಿವೆ' (ಮುಂ. ಉ. ೧. ೨. ೪).

**೮೨೮. ಸಪ್ತೈಧಾಃ**—ಏಳು ಜ್ವಾಲೆಗಳುಳ್ಳವನು.

(ಅಗ್ನಿರೂಪನಾದ) ಭಗವಂತನಿಗೆ ಏಳು ಜ್ವಾಲೆಗಳಿವೆ. ಆದುದರಿಂದ ಅವನು ಸಪ್ತೈಧಾ.

**೮೨೯. ಸಪ್ತವಾಹನಃ**—ಏಳು ವಾಹನಗಳುಳ್ಳವನು.

(ಸೂರ್ಯರೂಪನಾದ) ಭಗವಂತನಿಗೆ ಏಳು ಕುದುರೆಗಳು ವಾಹನಗಳಾಗಿವೆಯಾದುದರಿಂದ ಸಪ್ತವಾಹನ ಎಂದು ಹೆಸರು. ಅಥವಾ ಭಗವಂತನು ಸಪ್ತನಾಮ ಎಂಬ ಕುದುರೆಯು ವಾಹನವಾಗಿ ಇರುವವನಾದುದರಿಂದ ಅವನಿಗೆ ಸಪ್ತವಾಹನ ಎಂದು ಹೆಸರು.

**೮೩೦. ಅಮೂರ್ತಿಃ**—ಮೂರ್ತಿರಹಿತನು.

ಮೂರ್ತಿಯು ಘನರೂಪವಾದುದು, ಧಾರಣಶಕ್ತಿಯುಳ್ಳದ್ದು ಮತ್ತು ಚರಾಚರರೂಪವಾದುದು. ಭಗವಂತನು ಮೂರ್ತಿರಹಿತನಾದುದರಿಂದ ಅಮೂರ್ತಿ. ಅಥವಾ ಅವಯವಗಳಿಂದ ತುಂಬಿದ ದೇಹವೇ ಮೂರ್ತಿ. ಭಗವಂತನು ದೇಹವಿಲ್ಲದವನಾದುದರಿಂದ ಅಮೂರ್ತಿ.

**೮೩೧. ಅನಘಃ**—ದುಃಖಪಾಪಗಳಿಲ್ಲದವನು.

**೮೩೨. ಅಚಿಂತ್ಯಃ** — ಸರ್ವಪ್ರಮಾಣಗಳಿಗೂ ಅಗೋಚರನಾಗಿರುವವನು.

ಭಗವಂತನು ಜ್ಞಾತೃಾದಿಗಳಿಗೂ ಸಾಕ್ಷಿಯಾದುದರಿಂದ ಸರ್ವಪ್ರಮಾಣಗಳಿಗೆ ಅಗೋಚರನು; ಮತ್ತು ಅಚಿಂತ್ಯನು. ಅಥವಾ ಭಗವಂತನು ಪ್ರಪಂಚದಿಂದ ವಿಲಕ್ಷಣನಾದುದರಿಂದ ಅವನನ್ನು ಇಂಥವನೇ ಎಂದು ಚಿಂತಿಸಲು ಅಶಕ್ಯವು. ಆದುದರಿಂದ ಅವನು ಅಚಿಂತ್ಯನು.

**೮೩೩. ಭಯಕೃತ್** — ದುರ್ಮಾರ್ಗವರ್ತಿಗಳಿಗೆ ಭಯವನ್ನುಂಟುಮಾಡುವವನು.

ಅಥವಾ ಭಕ್ತರ ಭಯವನ್ನು ನಾಶಗೊಳಿಸುವವನು.

**೮೩೪. ಭಯನಾಶನಃ**—ವರ್ಣಾಶ್ರಮಧರ್ಮಗಳನ್ನು ಪಾಲಿಸುವವರ ಭಯವನ್ನು ನಾಶಮಾಡುವವನು.

